# ಸಿದ್ಧಗಂಗಾ

ಸಂಪುಟ–೨೬ ಸಂಚಿಕೆ–೭ ಜುಲೈ–೧೯೯೦.

ರಾಷ್ಟ್ರದ ಅಳಿವು ಉಳಿವಿನ ಪ್ರಶ್ನೆ ಬಂದು ಬದುಕು ಜಟಿಲವಾದಾಗ ಸ್ವಾರ್ಥವನ್ನು ಬದಿಗೊತ್ತಿ ಸಂಕುಚಿತ ಭಾವನೆಗಳನ್ನು ಬಿಟ್ಟು ಸದಾ ಜಾಗೃತರಾಗಿ ಸುಸಂಘಟಿತರಾಗಿ ಪ್ರತಿಯೊಬ್ಬ ವ್ಯಕ್ತಿಯೂ ರಕ್ತದ ಕೊನೆಹನಿ ಇರುವ ತನಕವೂ ಹೋರಾಡಿ ರಾಷ್ಟ್ರವನ್ನ ರಕ್ಷಿಸಬೇಕು. ರಾಷ್ಟ್ರ ರಕ್ಷಣೆಯ ಮುಂದೆ ಪ್ರಾಣವನ್ನು ತೃಣವಾಗಿ ಕಾಣಬೇಕು.

ಶ್ರೀ ಶ್ರೀ ಶಿವಕುಮಾರಸ್ವಾಮಿಗಳು

ಪ್ರಕಾಶಕರು:
ಹಳೆಯ ವಿದ್ಯಾರ್ಥಿಗಳ ಸಂಘ.
ಸಿದ್ಧಗಂಗಾ ಕ್ಷೇತ್ರ.

# ಸಿದ್ಧಗಂಗಾ

ಸಂಪುಟ ೨೮ ಸಂಚಿಕೆ-೭. ಜುಲೈ-೧೯೯೦

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಲೋಕ ಲೋಕದ ತೇಜ ಸೂರ್ಯ ಚಂದ್ರರ ತೇಜ
ಶಿವತೇಜ ತುಳುಕಿರುವ ಶ್ರೀಗುರುವೇ। ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆ ರೂಪ ಈ ರೂಪ ಲೋಕದೆಲ್ಲಾ ರೂಪ
ಬ್ರಹ್ಮಚರ್ಯದ ರೂಪ ತನರೂಪ।ಶ್ರೀಗುರುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

" ಭವ್ಯಮಾನವದ ಸಾಕಾರ " ಶಿಲ್ಪವೇ
" ಮರ್ತ್ಯದ ಮಹಾಭಾಗ್ಯ ಪರಮ " ವೇ। ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

— ಹೆಚ್. ವಿ. ವೀರಭದ್ರಯ್ಯ



## ಶ್ರೀ ವಾಣಿ

### ಭಿಕ್ಷದ ಮಠಗಳು :-

ಧರ್ಮ ನಂದಿ ಹೋಗಬಾರದೆಂಬ ಉದ್ದೇಶದಿಂದ ಪೂರ್ವಿಕರು ವ್ಯವಸ್ಥೆಮಾಡಿದ ಫಲ ಮಠಗಳು ಉದಯವಾದವು. ಮಠಗಳ ಕೆಲಸ ಮಾನವೀಯತೆಯನ್ನು ಬಿತ್ತುವುದು; ಬೆಳೆಸುವುದು. ಸಮಾಜ ಜೀವನ ಸತ್ಯ, ಶಿವ, ಸುಂದವಾಗಿರುವಂತೆ ಸದಾ ಕ್ರಿಯಾಶೀಲವಾಗಿರುವುದು. ಮಠಾಧಿಪತಿಯಾದವರ ಶುದ್ಧ ಚಾರಿತ್ರ್ಯ, ಲೋಕಸಂಗ್ರಹ ಚರ್ಯೆ, ಸೇವಾ ಮನೋಭಾಗಳಿಂದ ಮಠ ಪ್ರಭಾವಶಾಲಿಯಾದ ಸಂಸ್ಥೆಯಾಗಿ ಸಮಾಜದಲ್ಲಿ ಅಧ್ಯಸ್ಥಾನವನ್ನು ಪಡೆದು ಜನಾಂಗದ ಮನೋಧರ್ಮವನ್ನು ರೂಪಿಸುತ್ತ ಬಂದದ್ದು ಇತಿಹಾಸದಿಂದ ವ್ಯಕ್ತವಾಗುವ ವಿಚಾರ. ಎಲ್ಲ ಧರ್ಮಗಳಲ್ಲಿಯೂ ಮಠ ಮಾನ್ಯಗಳು ಒಂದಲ್ಲ ಒಂದು ಹೆಸರಿನಲ್ಲಿ ಸೇವೆಮಾಡುತ್ತ ಬಂದಿವೆ. ಅಂತೆಯೇ– ವೀರಶೈವ ಧರ್ಮದಲ್ಲಿಯೂ ಮಠಗಳು ಮಾಡುತ್ತಾ ಬಂದಿರುವ ಸೇವೆ ಗಣನೀಯವಾದುದು. ವೀರಶೈವ ಪರಂಪರೆಯಲ್ಲಿ ಅರಳಿದ ಮಠಗಳಲ್ಲಿ ಗುರುಮಠಗಳು, ವಿರಕ್ತಮಠಗಳು, ಶರಣ ಸಂಪ್ರದಾಯದ ಮಠಗಳು ಮತ್ತು ಭಿಕ್ಷದ ಮಠಗಳೆಂದು ಹೆಸರು ಪಡೆದಿರುವ ಸಂಸ್ಥೆಗಳಿವೆ. ಭಿಕ್ಷದ ಮಠಗಳ ಪರಂಪರೆಯ ಪ್ರವರ್ತಕರಾದ ಪುಣ್ಯಪುರುಷರೆಂದರೆ ಮೈಸೂರು ಜಿಲ್ಲೆಯ ನಂಜನಗೂಡು ತಾಲ್ಲೂಕಿನ ದೇವನೂರು ಮಠದ ಪೂಜ್ಯ ಗುರುಮಲ್ಲೇಶ್ವರರು ಹಾಗು ಮಲ್ಲನಮೂಲೆ ಮಠದ ಪೂಜ್ಯ ಕಂಬಳೀಶ್ವರರು. ಅನುಭಾವಿಗಳಾದ ಈ ಈರ್ವರು ರೂಪಿಸಿದ ಭಿಕ್ಷದ ಮಠಗಳ ಸಂಸ್ಥಾಪನೆಯಲ್ಲಿ ಒಂದು ಮಹತ್ವದ ತತ್ವ ಸಂದೇಶ ನಿಕ್ಷೇಪವಾಗಿರುವುದನ್ನು ನಾವು ಗುರುತಿಸಬಹುದು. ಶರಣರ ವಚನಧರ್ಮದಲ್ಲಿ ಕಾಯಕ – ದಾಸೋಹ ಅದ್ಭುತವಾದ ಹಾಗು ಸಾರ್ವಕಾಲಿಕವಾದ ಜೀವನ ಮೌಲ್ಯಗಳಾಗಿ ಪ್ರತಿಪಾದಿತವಾದದ್ದು ಲೋಕದ ಪುಣ್ಯ. ಅಂತಹ ಪವಿತ್ರ ತತ್ವಗಳನ್ನು ಸಾಮಾನ್ಯರೂ ಜೀವನದಲ್ಲಿ ಅಳವಡಿಸಿಕೊಳ್ಳಲು ಅನುಕೂಲವಾಗುವಂತೆ ಹಳ್ಳಿ ಹಳ್ಳಿಗಳಲ್ಲಿ ಭಿಕ್ಷದ ಮಠಗಳು ಉದಯವಾದುವು. ಭಿಕ್ಷದ ಮಠಕ್ಕೆ

ಅಧಿಪತಿಯಾಗಿ ಬರುವ ಸ್ವಾಮಿ ಗ್ರಾಮದಲ್ಲಿ ಎಲ್ಲ ಮನೆಗಳಿಗೂ ಹೋಗಿ ಭಕ್ತರು ನೀಡಿದ ಪ್ರಸಾದವನ್ನು (ಕಂತೆಭಿಕ್ಷವನ್ನು) ತಂದು ಮಠದಲ್ಲಿ ಪರಸ್ಥಳಗಳಿಂದ ನಾನಾ ಕಾರ್ಯಗಳಿಗಾಗಿ ಬಂದ ಭಕ್ತಾದಿಗಳಿಗೆ ನೀಡುವ ಪದ್ಧತಿಯನ್ನು ರೂಢಿಸುತ್ತ ಬಂದರು. ಇದರಿಂದಾಗಿ ಬಡವ-ಬಲ್ಲಿದರೆನ್ನದೆ ತನು ದಂಡಿಸಿ, ಮನ ಬಳಲಿಸಿ, ಕಾಯ ಕಷ್ಟ ದಿಂದ ಆರ್ಜಿಸಿ ಸಿದ್ಧಗೊಳಿಸಿದ ಪ್ರಸಾದ ಸಂಸ್ಥೆಯ ಮೂಲಕ ಸರ್ವರಿಗೂ ಲಭ್ಯ ವಾದಂತಾಯಿತು. ಪವಿತ್ರ ಮನಸ್ಸುಗಳು ನೀಡಿದ್ದು ಪ್ರಸಾದಗೊಂಡು ಶ್ರೇಷ್ಠ ಭಾವನೆಗಳು ವೃದ್ಧಿಯಾಗಲು ಸಹಕಾರಿಯಾಯಿತು. ಭಿಕ್ಷದ ಮಠದಸ್ವಾಮಿಗಳು ಲೋಕಾನುಭವ ಸಂಪನ್ನರಾಗಿ ಶಿವಾನುಭವ ಚರಮೂರ್ತಿಗಳಾಗಿ ದಯಾರ್ದ್ರ ಹೃದಯ ಗಳಾಗಿ ಗ್ರಾಮ ಜೀವನದ ಕಣ್ಣಾಗಿ ಬೆಳಗಿದರು. ಧರ್ಮದ ತಿರುಳನ್ನು ಸದ್ದಿಲ್ಲದಂತೆ ಸಾಮಾನ್ಯರಿಗೂ ಪ್ರವಚನ, ಭಜನೆ, ಅನುಭಾವ ಗೀತೆಗಳ ಮೂಲಕ ಬೋಧಿಸುತ್ತ ಬಂದರು. ಮಾನವೀಯತೆಯ ಹಣತೆ ನಂದಿ ಹೋಗದಂತೆ ನೋಡಿಕೊಂಡರು.

(ಮಂಡ್ಯ ಜಿಲ್ಲೆ, ಮಳವಳ್ಳಿ ತಾಲ್ಲೂಕು, ಹೊಸಹಳ್ಳಿ ಗ್ರಾಮದಲ್ಲಿ 3 6-1990 ರಂದು ಮಾಡಿದ ಆಶೀರ್ವಚನದಿಂದ ಸಂಗ್ರಹಿಸಿದ್ದು)

---

ಬಸವಣ್ಣನಂತ ಭಕ್ತರಿಲ್ಲ. ಜ್ಞಾನವೇ ಶಕ್ತಿ. ಶಕ್ತಿಯೇ ಜೀವನ. ಅಜ್ಞಾನವೇ ದೌರ್ಬಲ್ಯ. ದೌರ್ಬಲ್ಯವೇ ಮರಣ.

ಸಾಧಕನ ಲಕ್ಷಣಗಳು ಮೂರು;- ಆತ್ಮ ಕಲ್ಯಾಣವೇ ಜಗತ್ತಿಗೆ ಹಿತ, ಜಗತ್ತಿನ ಹಿತವೇ ಆತ್ಮಕಲ್ಯಾಣ. ಕಲ್ಲು ಬಂಡೆಗಳಿಂದ ಕಟ್ಟಲಾದ ಗುಡಿಗಳಿಗಿಂತಲೂ, ನರಗಳಿಂದಲೂ, ಮಾಂಸಗಳಿಂದಲೂ, ಕಟ್ಟಲಾಗಿರುವ ಮಾನವಶರೀರಗಳೇ ನಿಜವಾದ ದೇವಾಲಯಗಳು. ಗುರುವಿಗೆ ಗುಲಾಮನಾದಾಗಲೇ ಸಾಧನಗೆ ಮುಕ್ತಿ.

(ನೀನು ವಿಶ್ವದಲ್ಲಿ ಮನುಷ್ಯನಾಗಿ ಬಂದ ಮೇಲೆ ಏನಾದರೂ ಸ್ವಲ್ಪ ಮಹತ್ಕಾರ್ಯವನ್ನು ಸಾಧಿಸು. ಕೇವಲ ಹುಳುವಂತೆ ಹುಟ್ಟಿ ಸತ್ತರೆ ಏನು?)

ಓಂ ಶಾಂತಿ, ಶಾಂತಿ, ಶಾಂತಿ.

**ಸಂಗ್ರಹ:-** ಜಿ. ವಿ. ಎಸ್. ರಾಮಪ್ಪ.

---

## ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ ವಜ್ರ ಮಹೋತ್ಸವ

ಹಳೆಯ ವಿದ್ಯಾರ್ಥಿಗಳ ಸಂಘ

**ಶ್ರೀ ಸಿದ್ಧಗಂಗಾಮಠ, ತುಮಕೂರು ಜಿಲ್ಲೆ-57 104,**

ದಿನಾಂಕ: 1-7-90 ರಂದು ಶ್ರೀ ಸಂಘದ ಕಾರ್ಯಕಾರಿ ಸಮಿತಿ ಸಮಾವೇಶ ಗೊಂಡ ಸಭೆಯಲ್ಲಿ ಕೈಗೊಂಡ ನಿರ್ಣಯಗಳು ಹೀಗಿವೆ.

1. ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ವಜ್ರ ಮಹೋತ್ಸವವನ್ನು 1991ರ ಏಪ್ರಿಲ್ ಮಾಹೆಯಲ್ಲಿ ಆಚರಿಸುವ ಸಲುವಾಗಿ ರಾಜ್ಯ ಮಟ್ಟದ ಸಮಿತಿಯೊಂದನ್ನು ರೂಪಿಸುವುದಕ್ಕೆ ಉಪ-ಸಮಿತಿಯೊಂದನ್ನು ಆಯ್ಕೆಮಾಡಲಾಯಿತು.

2. ಉಪಸಮಿತಿ ಭಕ್ತಾದಿಗಳ ಸಭೆಯನ್ನು ಜುಲೈ ಅಂತ್ಯದೊಳಗಾಗಿ ಕರೆಯ ಬೇಕೆಂಬುದಾಗಿ ನಿರ್ಣಯಿಸಲಾಯಿತು.

3. ಈ ಸಂಬಂಧವಾಗಿ ಹಳೆಯ ವಿದ್ಯಾರ್ಥಿ ಸಂಘದ ವಿಶೇಷ ಸರ್ವಸದಸ್ಯರ ಸಭೆಯನ್ನು ಕರೆಯಬೇಕೆಂದು ತೀರ್ಮಾನಿಸಲಾಯಿತು.

4. ಪರಮ ಪೂಜ್ಯರ 60 ವರ್ಷಗಳ ತಪೋಜೀವನಕ್ಕೆ ಸಂಬಂಧಿಸಿದ ವಿವಿಧ ಭಾವಚಿತ್ರಗಳ ಹಾಗೂ ನೆನಪಿನ ಕೊಡುಗೆಗಳ ಸಂಗ್ರಹಾಲಯವನ್ನು ಶ್ರೀ ದರ್ಶನಮಂಟಪ ಎಂಬ ಹೆಸರಿನಲ್ಲಿ ಯಾತ್ರಾರ್ಥಿಗಳಿಗೆ ಸಂದರ್ಶನಕ್ಕಾಗಿ ತೆರೆದಿಡುವ ವ್ಯವಸ್ಥೆ ಮಾಡಲು ನಿರ್ಣಯಿಸಲಾಯಿತು.

5. ಕಾರ್ಯಕಾರಿ ಸಮಿತಿ ಅತ್ಯಂತಕ್ರಿಯಾಶೀಲವಾಗಿ ಚರ್ಚೆಯಲ್ಲಿ ಭಾಗವಹಿಸಿದ್ದು ಸಂತೋಷಕರವಾಗಿತ್ತು. ಸಭೆಯ ಅಧ್ಯಕ್ಷತೆಯನ್ನು ಸಂಘದ ಪ್ರಧಾನ ಕಾರ್ಯದರ್ಶಿಗಳಾದ ಪ್ರೊ. ಎಂ. ಎನ್. ಚನ್ನಬಸಪ್ಪನವರು ವಹಿಸಿದ್ದರು.

# ಶ್ರೀ ಉದ್ದಾನೇಶ್ವರ ಶತಕ

ಜಿ. ವಿ. ರಾಜಶೇಖರಯ್ಯ (ಮುಂದುವರಿದುದು)

ಮನುಮುನೀಶ್ವರ ಹರಿವಿಧೀಂದ್ರರು
ಘನದ ನಿನ್ನಯ ಪಾದವೊಂದೊಂ
ದಿಣಿಕಿ ಕಾಣರು ನಾದಬಿಂದು ಕಳಾಮಯಾದ್ವಯದಾ ।
ಬಿನುಗುಪಾದತ್ರಯವನಾ ಶಿವ
ನನಘ ಶರಣರು ಕಂಡರವರತಿ
ಘನರು ಜಗದೊಳಗೆಂದ ಉದ್ದಾನೇಶದಯವಾಗೋ ॥೨೧॥

ನೀನೆವಿದ್ಯೆಯು ನೀನೆಬುದ್ಧಿಯು
ನೀನೆಜ್ಞಾನದ ಸಿದ್ಧಿವೃದ್ಧಿಯು
ನೀನೆತತ್ವ ವಿನೋದವನು ಭವವಾದ ಪರಿಶುದ್ಧಾ ।
ನೀನೆ ಮಾನವು ನೀನೆ ಪ್ರಾಣವು
ನೀನೆ ನೇಮವು ಬಂಧು ಬಳಗವು
ನೀನೆ ಗತಿಮತಿ ಜೀಯ ಉದ್ದಾನೇಶದಯವಾಗೋ ॥

ಬ್ರಹ್ಮ ನಿಷ್ಮನು ಎನಿಸಿನೀವರ
ಬ್ರಹ್ಮಪೈಶಾಚವನು ಹರಸುತೆ
ಬ್ರಹ್ಮ ಚರ್ಯದಿ ನಡೆದೆ ಚೋದ್ಯವು ವಿರತಿಪಥಗಾಮೀ॥
ಬ್ರಹ್ಮವಾಸನೆ ಬ್ರಹ್ಮವಸನೆನೆ
ಬ್ರಹ್ಮ ವೇಷನೆ ಬ್ರಹ್ಮ ಶಿರಹರ
ಬ್ರಹ್ಮ ಮೂರ್ತಿಯೆ ಜೀಯ ಉದ್ದಾನೇಶದಯವಾಗೋ॥೨೩॥

ಒಬ್ಬನೇ ಜಗದೀಶನೆನುತಿರ
ಲೊಬ್ಬಮಾನವ ದೇಹದೊಳು ಶಿವ
ನುಬ್ಬಿ ಚಂದ್ರನ ಕಳೆಯಕ್ಕೆಗಳ ಬಾಳನೇತ್ರವನೂ ।
ಮಬ್ಬಿನಾಜನರಿಯದೊಲು ಮರೆ
ದಬ್ಬಿಬಂದಿಹ ನಮ್ಮ ಪುಣ್ಯದ
ಶಬ್ಬೆ ಫಲವೇ ಜೀಯ ಉದ್ದಾನೇಶದಯವಾಗೋ॥ ॥೨೪॥

ನಿನ್ನವಾಕ್ಯವೇ ವೇದ ವಚನವು
ನಿನ್ನ ಶ್ವಾಸವೇ ಪರಮ ಮಂತ್ರವು
ನಿನ್ನ ಹಾಸವೇ ವರವಿಲಾಸವು ದಯೆಯೆ ಮುಕ್ತ್ಯುದಯಾ॥
ನಿನ್ನ ದೃಷ್ಟಿಯೇ ದಿವ್ಯವೃಷ್ಟಿಯು
ನಿನ್ನ ಪಾದವೆ ಕಲ್ಪಪಾದಪ
ನಿನ್ನ ನಂಬಿದೆನಯ್ಯ ಉದ್ದಾನೇಶದಯವಾಗೋ ॥೨೫॥

## ಶ್ರೀ ಸಿದ್ಧಲಿಂಗೇಶ್ವರ ವಚನ



ವಾರಣದುದರದಲ್ಲಿ ಮಾರಿ ಮನೆಯ ಮಾಡಿಕೊಂಡಿರ್ಪಳು
ಮಾರಿಯ ಮನೆಯ ಹೊಕ್ಕವರೆಲ್ಲಾ ದಾರಿಯ ಕಾಣದೆ,
ಹೋರಾಟ ಗೊಳ್ಳುತ್ತಿದ್ದಾರೆ ನೋಡಾ.
ಇವರೆಲ್ಲರ ಹೋರಾಟವ ಕಂಡು,
ಮೂರು ಲೋಕದ ಮಸ್ತಕವ ಮೆಟ್ಟಿನಿಲಲು,
ವಾರಣದುದರ ಬೆಂದಿತ್ತು, ಮಾರಿ ಸತ್ತಳು;
ದಾರಿ ನಿಜಾಟವಾಯಿತ್ತು ನಿಮ್ಮವರಿಗೆ
ಮಹಾ ಲಿಂಗ ಗುರು ಶಿವ ಸಿದ್ದೇಶ್ವರ ಪ್ರಭುವೇ.

ಅಷ್ಟಮದಗಳಿಂದಕೂಡಿದ ಜೀವನ ಗರ್ಭದಲ್ಲಿ ಮಾಯೆ ಮನೆ ಮಾಡಿಕೊಂಡಿದ್ದಾಳೆ. ಅಭೇಧ ಜ್ಞಾನಶಕ್ತಿಯ ಭಿನ್ನ ಪ್ರಪಂಚದಲ್ಲಿಬ ಂದ ಬರು ಹಿರಿಯರು ನಿವೃತ್ತಿಜ್ಞಾನ ತಿಳಿಯದೆ ಭವ ಭವಗಳಲ್ಲಿ ಕೋಟಲೆಗೊಳ ಗಾಗುತ್ತಿದ್ದಾರೆ. ದ್ವೈತಾ ದ್ವೈತಿಗಳ ಭಿನ್ನಕ್ರಿಯೆ ಭಿನ್ನಜ್ಞಾನವನ್ನು ಮಿಥ್ಯ ವೆಂದು ತಿಳಿದು, ಸಮರಸ ಕ್ರಿಯಾಚರಣೆಯಿಂದ ಸ್ಥೂಲ, ಸೂಕ್ಷ್ಮ, ಕಾರಣ ತನುಗಳ ವರ್ತನೆಯನ್ನು ಕಳೆದುಕೊಂಡು, ಲಿಂಗ ವೇಧಿಯಾದ ಶರಣನ ಅಷ್ಟತನುವರ್ತನೆ ಜ್ಞಾನಾಗ್ನಿಯಿಂದ ನಿವೃತ್ತಿಯಾಗಿ; ಅಷ್ಟವಿಧ ಭಕ್ತಿ ಸ್ವರೂ ಪವಾಯಿತು. ನಿನಗೆ ಅಂಗವಾಗುವುದಕ್ಕಾಗಿ ಎರಡು ಅಳಿದಂಥೆ ನಿಜ ಶರಣ ರಿಗೆ ಭೇಧ ಜ್ಞಾನವಳಿದು ಮೋಕ್ಷಮಾರ್ಗವಾಯಿತು – ಎನ್ನುತ್ತದೆ ವಚನ

**ಸಿದ್ಧಗಂಗಾ ಮಾಸ ಪತ್ರಿಕೆ**

ಶ್ರೀ ಸಿದ್ಧಗಂಗಾ ಮಠ-572 104

ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು

**ಪ್ರೊ॥ ಚನ್ನಪ್ಪ ಎರೇಸೀಮೆ**

* * *

ಸಂಪಾದಕರು

**ಹೆಚ್. ವಿ. ವೀರಭದ್ರಯ್ಯ**

* * *

ಸಹ ಸಂಪಾದಕರು

**ಬಿ. ವೀರಭದ್ರಯ್ಯ**

**ಪಿ. ಎಸ್. ಚಂದ್ರಶೇಖರಯ್ಯ**

* * *

ಜಾಹೀರಾತು ವಿಭಾಗ

**ಎಂ. ರೇಣುಕಾರಾಧ್ಯ**

* * *

ವಿತರಣೆ ವಿಭಾಗ

**ಆರ್. ಎಸ್. ಮಲ್ಲೇಶಪ್ಪ**

* * *

ಪ್ರಕಾಶಕರು

**ಹೆಚ್. ಬಿ. ಗಂಗಾಧರಯ್ಯ**

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ**

* * *

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

ವಾರ್ಷಿಕ ಚಂದಾ 20-00 ರೂ

ಅಜೀವ ಸದಸ್ಯತ್ವ 250-00 ರೂ


## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ, ಮೇಲಾಗಿ ಶ್ರೀ ಮಠದ ಮುಖವಾಣಿ, ಪೂಜ್ಯ ಶ್ರೀ ಶ್ರೀ ಡಾ॥ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟ್ಯಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ: ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572 104

ತುಮಕೂರು ಜಿಲ್ಲೆ.

ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ

# ಸಂಪಾದಕೀಯ

## ಡಾ॥ ಎಲ್. ಬಸವರಾಜು.

ಶರಣ ಸಾಹಿತ್ಯ ಅನುಭಾವಿಗಳ ಅರವಟಿಗೆಯಿಂದ ಅಭಿವ್ಯಕ್ತಗೊಂಡ ಅಮೂಲ್ಯ ಸಾಹಿತ್ಯ. ವಚನ ಹಾಗೂ ವಚನೇತರ ಪ್ರಕಾರಗಳಲ್ಲಿ ಪ್ರಕಟವಾಗಿರುವ ಆ ಸಾಹಿತ್ಯದಲ್ಲಿ ಸಂಶೋಧನೆಯನ್ನು ಮಾಡಿರುವ ವಿದ್ವಾಂಸರು ಅನೇಕರು ಅವರೆಲ್ಲರ ಪರಿಶ್ರಮ ಪ್ರತಿಭೆಗಳ ಫಲವಾಗಿ ಶರಣ ಧರ್ಮ ಸಾಹಿತ್ಯಾಭಿಮಾನಿಗಳು ಪರಿಷ್ಕೃತ ಹಾಗೂ ಪ್ರಮಾಣಿಕ ಕೃತಿಗಳನ್ನು ಕಾಣುವ ಭಾಗ್ಯವಂತರಾದರು. ನಿಷ್ಠೆ ಮತ್ತು ಶ್ರದ್ಧೆಗಳನ್ನೇ ಹಾಸು ಹೊಕ್ಕಾಗಿಸಿಕೊಂಡು ಸಂಶೋಧನೆಯನ್ನು ಜೀವನದ ತಪಸ್ಸನ್ನಾಗಿಸಿಕೊಂಡು ದುಡಿದ ಪರಿಣಾಮವಾಗಿ ಶರಣ ಸಾಹಿತ್ಯದ ಅನೇಕಉದ್ಗ್ರಂಥಗಳನ್ನು ಕನ್ನಡ ಸಾರಸ್ವತ ಭಕ್ತರು ಕಾಣುವಂತಾಯಿತು. ಅವರೆಲ್ಲ ಪ್ರಾತಃ ಸ್ಮರಣೀಯರಾಗಿದ್ದಾರೆ.

ಡಾ॥ ಎಲ್. ಬಸವರಾಜುರವರು ಅಲ್ಲಮ ಪ್ರಭು ಮುಂತಾದ ಶರಣರನೇಕರ ವಚನಗಳನ್ನು ಸಂಪಾದಿಸಿ ಕೊಟ್ಟಿರುವ ಶ್ರೇಷ್ಠಮಟ್ಟದ ವಿದ್ವಾಂಸರು. ಅಲ್ಲಮನ ವಚನ ಚಂದ್ರಿಕೆ, ದೇವರದಾಸಿಮಯ್ಯನ ವಚನಗಳು, ಶೂನ್ಯಸಂಪಾದನೆ, ಶಿವದಾಸ ಗೀತಾಂಜಲಿ, ಅಕ್ಕನವಚನಗಳು, ಪರಮಾರ್ಥ, ಮುಂತಾಗಿ ಅವರು ಸಂಪಾದಿಸಿರುವ ಶರಣಸಾಹಿತ್ಯ ಕೃತಿಗಳು.

"ಅಲ್ಲಮನ ವಚನ ಚಂದ್ರಿಕೆ" ಈ ವಚನ ಸಂಗ್ರಹವನ್ನು ಡಾ॥ ಎಲ್. ಬಸವರಾಜು ಅವರು ಮಾಡಿ ಕೃತಾರ್ಥರಾಗಿದ್ದಾರೆ. ಇವರು ಈಗಾಗಲೇ ಅನೇಕ ಸಾಹಿತ್ಯಿಕ ಹಾಗೂ ಸಂಶೋಧನಾತ್ಮಕ ಕೃತಿಗಳನ್ನು ರಚಿಸಿದ್ದಾರೆ. "ಅಲ್ಲಮನ ವಚನ ಚಂದ್ರಿಕೆ "ಯ ಉದ್ಬೋಧಕ ಪೀಠಿಕೆ ಹೊಂದಿದೆ. ಪಂಡಿತರಿಗೂ-ಪಾಮರರಿಗೂ ಸರಳವಾಗಿ ತಿಳಿವಂತೆ ನಿರೂಪಿಸಿದ್ದಾರೆ"-ಎಂಬ ಶ್ರೀ ಮು.ಜ.ಗಂ. ರವರ ಮಾತುಗಳು ಯಥಾರ್ಥವಾಗಿವೆ.

"ಶಿವದಾಸಗೀತಾಂಜಲಿ" ಇನ್ನೊಂದು ಉದ್ಗ್ರಂಥ. ಶರಣರ ಅನೇಕ ಗೀತೆಗಳನ್ನು ಶಾಸ್ತ್ರೀಯವಾದ ರೀತಿಯಲ್ಲಿ ಸಂಪಾದಿಸಿರುವ ಶ್ರೇಷ್ಠಕೃತಿ. "ಪರಮಾರ್ಥ" ಸರ್ವಜ್ಞನ ವಚನಗಳ ಮತ್ತೊಂದು ಹೆಸರುಳ್ಳಕೃತಿ. ಪ್ರತಿತ್ರಿಪದಿಯೂ 'ಪರಮಾರ್ಥ' ಎಂದು ಮುಗಿಯುತ್ತದೆ. ಶೂನ್ಯಸಂಪಾದನೆ ಶರಣ ಸಾಹಿತ್ಯದ ಅನರ್ಘ್ಯಕೃತಿ, ಅದನ್ನು ಸಂಪಾದಿಸಿದ ಯಶಸ್ಸು ಅವರಿಗೆ. ವಚನಗಳ ಸಂಪಾದನೆಯಲ್ಲಿ ಅನುಸರಿಸಿರುವ ವಿಧಾನ ಗ್ರಂಥ ಸಂಪಾದನಾ ಮಾರ್ಗದಲ್ಲಿ ಆದರ್ಶನೀಯ.

ಶ್ರೇಷ್ಠಮಟ್ಟದ ಪ್ರಾಧ್ಯಾಪಕರಾಗಿ, ನಿರ್ಭಿಡೆಯ ಸ್ವಭಾವ, ಖಚಿತ ಅಭಿಪ್ರಾಯ, ನೇರನುಡಿಯ, ಸರಳ ಉಡುಗೆಯ, ಡಾ॥ ಎಲ್. ಬಸವರಾಜುರವರು ಸಂಶೋಧನೆ, ಸಂಪಾದನೆಯ ಮಾರ್ಗದಲ್ಲಿ ಪ್ರಮುಖ ಸಾಲಿನಲ್ಲಿರುವ ಹಿರಿಯ ವಿದ್ವಾಂಸರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಮೂವತ್ತೈದು ವರ್ಷಗಳ ಕಾಲ ಪ್ರಾಧ್ಯಾಪಕರಾಗಿ ಸೇವೆಸಲ್ಲಿಸಿದ ಕೀರ್ತಿ ಅವರದು. ಸಹಸ್ರರು ವಿದ್ಯಾರ್ಥಿಗಳಿಗೆ ಸ್ಫೂರ್ತಿಯಾದವರು. ಅವರ ಬೋಧನಾ ವಿಧಾನ ಚೇತೋಹಾರಿಯಾದುದು. ತಲಸ್ಪರ್ಶಿಯಾದ ಜ್ಞಾನ. ಅದನ್ನು ಮುಕ್ತವಾಗಿ ನೀಡುವ ಔದಾರ್ಯ. ಶರಣ ಸಾಹಿತ್ಯತಪಸ್ವಿಯಾಗಿ ಕಂಗೊಳಿಸಿದ್ದಾರೆ ಇಂದು.

ಅಖಿಲ ಭಾರತ ಮೂರನೆಯ ಶರಣಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಯಾಗಿರುವ, ಗೌರವಾದರ್ಶಗಳಿಗೆ ಪಾತ್ರರಾಗಿರುವ **ಡಾ॥ ಎಲ್. ಬಸವರಾಜುರವರ ಶ್ರೀ ಸಿದ್ಧಗಂಗಾ ಮಠದ ಹಳೆಯ ವಿದ್ಯಾರ್ಥಿಗಳು** ಶ್ರೀ ಸಿದ್ಧಗಂಗಾ ಶಾಲೆಯಲ್ಲಿ ಸಿದ್ಧರಾದವರು. ಪರಮ ಪೂಜ್ಯ ಶ್ರೀ ಉದ್ಧಾನಶಿವಯೋಗಿಗಳವರ ಕೃಪಾನುಗ್ರಹಕ್ಕೆ ಪಾತ್ರರಾಗಿ, ಕನಕಪುರ ದೇಗುಲ ಮಠದ ಅಧ್ಯಕ್ಷರಾಗಿದ್ದ ಲಿಂಗೈಕ್ಯ ಪೂಜ್ಯ ಶ್ರೀ ಮಹಾಲಿಂಗಸ್ವಾಮಿಗಳವರ ಪೂರ್ವಾಶ್ರಮದ ಸಹಪಾಠಿಗಳು, ಸ್ನೇಹಿತರು ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ ಅನುಗ್ರಹಕ್ಕೆ ಪಾತ್ರರಾದವರು. ಕೋಲಾರ ಜಿಲ್ಲೆ ಬಂಗಾರದ ಗಣಿಗೆ ಹೆಸರಾಗಿರುವಂತೆಯೇ ವಿದ್ವಾಂಸರಿಗೂ ಜನ್ಮ ಕೊಟ್ಟು ಧನ್ಯವಾಗಿದೆ. ಡಾ॥ ಬಸವರಾಜುರವರು ಕೋಲಾರ ಜಿಲ್ಲೆಯ ಹೆಮ್ಮೆಯ ಪುತ್ರರು.

ಶ್ರೀ ಮಠದ ಹಳೆಯ ವಿದ್ಯಾರ್ಥಿಗಳಾದ ಡಾ॥ ಎಲ್. ಬಸವರಾಜುರವರು ಶರಣ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿರುವ ಈ ಶುಭ ಸಂದರ್ಭದಲ್ಲಿ ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘ ಹಾಗೂ ಸಂಘದ ಪತ್ರಿಕೆಯಾದ "ಸಿದ್ಧಗಂಗಾ" ತುಂಬು ಹೃದಯದ ಅಭಿನಂದನೆಗಳನ್ನು ಸಲ್ಲಿಸಲು ಸಂತೋಷಿಸುತ್ತದೆ.





# ವಚನಾಧ್ಯಯನ

## ಹರಿದಾಸರಿಗೆ ಪ್ರೇರಣೆಗಳು–ಒಂದು ಅವಲೋಕನ.

ಶ್ರೀ ಸದಾನಂದ ಪಾಟೀಲ್, ಕನ್ನಡ ಉಪನ್ಯಾಸಕರು, ಸ॥ಪ॥ಪೂ॥ ಕಾಲೇಜು ಆಡೂರ. ಹಾನಗಲ್ ತಾ॥ ಧಾರವಾಡ ಜಿಲ್ಲೆ.

ಕನ್ನಡ ಸಾಹಿತ್ಯದ ಪ್ರಾರಂಭದ ಘಟ್ಟದಲ್ಲಿ ಸಂಸ್ಕೃತದ ವರ್ಣವೃತ್ತಕ್ಕನುಸರಿಸಿ ೯.೧೦-೧೧ ನೆಯ ಶತಕದ ಚಂಪೂ ಕೃಷಿ ಹುಲುಸಾಗಿ ಕಂಡಂತೆ ೧೧ ರ ಉತ್ತರಾರ್ಧದಿಂದ ಹಿಡಿದು ಮುಂದಿನ ಕಾಲದ ಕನ್ನಡ ಸಾಹಿತ್ಯ ಭೂಮಿ ಹೊಸ ಪ್ರಕಾರಗಳ ಬೆಳೆಗಳಿಂದ ಹಚ್ಚ ಹಸುರಾಯಿತು. ಈ ಸಮೃದ್ಧಿಗೆ ಕಾರಣರಾದವರು ವೀರಶೈವರು.

ಒಂದು ಗುರಿಯನ್ನು ಸಾಧಿಸಲು ಹುಟ್ಟಿಕೊಂಡ ಸಾಹಿತ್ಯ ತನ್ನೆಲ್ಲ ಮೈಯಿಂದ ಅದು ಪ್ರಭಾವಿತವಾಗಿ ಬೆಳೆಯುತ್ತದೆ; ಬೆಳೆಸುತ್ತದೆ. ಅಂತಹ ಹೊಸ ರೂಪ ತಳೆದುಕೊಂಡು ಶಿವಶರಣರ ವಚನ ಸಾಹಿತ್ಯವು ನಾಡಿನ ಸಂಸ್ಕೃತಿಯ ಎಲ್ಲ ಅಂಗಗಳಲ್ಲೂ ಕೊಡುಗೆ ನೀಡಿದೆ. ಮೇಲ್ ವರ್ಗದಿಂದ ಹಿಡಿದು ಕೆಳವರ್ಗದ ಸಾಮಾನ್ಯರೂ ಬಸವಾದಿಗಳ ಕೃಪೆಯಿಂದ ಕಲಿತೋದಿ ಬರೆಯುವವಷ್ಟರ ಮಟ್ಟಿಗೆ ಶಿಕ್ಷಣ ಪಡೆದು ವಚನ ಸಾಹಿತ್ಯ ರಚನೆಗೆ ತೊಡಗಿದ್ದು ಎರಡನೆಯ ಘಟ್ಟ. ಈ ಎರಡನೆಯ ಘಟ್ಟವು ೧೨ ನೆಯ ಶತಕಕ್ಕೆ ಸೀಮಿತವಾಗಿ ಹರಿಹರ-ರಾಘವಾಂಕರು ಪ್ರಯೋಗ ಶೀಲ ವಚನಕಾರರಂತೆಯೆ ಸಾಹಿತ್ಯಕ್ಕೆ ಹೊಸರೂಪ ಕೊಟ್ಟ ಮೂಲ ಪುರುಷರಾದರು. ಅಧ್ಯಯನದ ದೃಷ್ಟಿಯಿಂದ ಇದು ಮೂರನೆಯ ಘಟ್ಟ. ಇನ್ನು ಮುಂದಿನ ಸಾಹಿತ್ಯ ಕೃಷಿಯೆಂದರೆ ಬಿತ್ತಿದ್ದನ್ನೆ ಬಿತ್ತಿ ಇದ್ದುದರಲ್ಲೇ ತೃಪ್ತಿಪಡುವ ಅನುಕರಣೆಯ ಒಕ್ಕಲಿಗನ ಪರಿಸ್ಥಿತಿಯಂತಾಯಿತು.

ವಚನಗಳ ಸಂಗ್ರಹಣೆ, ಸಂಪಾದನೆ, ರಕ್ಷಣೆ, ರಚನೆ ಮತ್ತು ವಚನಕಾರರ-ಚರಿತ್ರೆ, ಪುರಾಣ ಬರೆಯುವದರ ಮೂಲಕ ವೀರಶೈವ ಧರ್ಮದ ಅಸ್ತಿತ್ವವುಳಿಸುವ ಹಾಗೂ ಜನಪರವಾಗಿ ಜನಪ್ರಿಯ ಗೊಳಿಸುವ ಸಂಗೀತ, ಭಜನೆ, ಕೀರ್ತನೆಗಳಂತಹ ಸಮೂಹ ಮಾಧ್ಯಮವನ್ನು ಚುರುಕುಗೊಳಿಸುವ ಕ್ರಿಯೆ ೧೫-೧೬ ನೆಯ ಶತಮಾನದಲ್ಲಿ ನಡೆಯಿತು. ಇದು ವೀರಶೈವ ಸಾಹಿತ್ಯದ ದೃಷ್ಟಿಯಿಂದ ಮೂರನೆಯ ಘಟ್ಟ. ಒಟ್ಟು ಸಾಹಿತ್ಯದ ದೃಷ್ಟಿಯಿಂದ ನಾಲ್ಕನೆಯ ಘಟ್ಟ. ಇಲ್ಲಿ ಹೊಸ ಬೆಳವಣಿಗೆ ಎಂದರೆ ವಚನಗಳು, ಸ್ವರವಚನಗಳು ವೀರಶೈವೇತರರಾದ ಹರಿದಾಸರಿಂದ ಹಾಡುಗಳು ಹುಟ್ಟಿ ಬರಲು ಕಾರಣವಾದುದ್ದು. ರಾಘವಾಂಕನಿಂದ ಹೊರಟ ಷಟ್ಪದಿಯು ಬೇರೆ ಬೇರೆ ಕವಲುಗಳಲ್ಲಿ ಗೇಯತೆಯನ್ನೊಳಗೊಂಡು ಬೆಳೆದದ್ದು; ವೀರಶೈವೇತರರೂ ಬೆಳೆಸಿದ್ದು.

ಸೂಕ್ಷ್ಮವಾಗಿ ಆಲೋಚಿಸಿದರೆ ಜಾನಪದರ ಸಂಗೀತ ಮೇಳವೆನಿಸಿದ ಭಜನೆ ಹಾಗು ಹರಿಹರನ ವಿವಿಧ ಲಯಗಳ ರಗಳೆಗಳು ಈ ಘಟ್ಟದಲ್ಲಿ ತುಂಬ ಪರಿಣಾಮ ಕಾರಿಯಾದ ಪ್ರಭಾವ ಬೀರಿವೆ. ಸಾಹಿತ್ಯ ಹಾಗು ಸಂಗೀತ ಕುರಿತು ಭಜನೆ-ಹಾಗು ರಗಳೆಗಳು ಮುಂದಿನ ಕಾಲದವರೆಗೆ ಎಷ್ಟು ಬಗೆಯ ಪ್ರೇರಣೆಯಾಗಿವೆ ಎಂಬುದು ಅಧ್ಯಯನ ನಡೆಯಬೇಕಾಗಿದೆ.

ಸಧ್ಯಕ್ಕೆ ವಚನಗಳ ವಸ್ತು ಮತ್ತು ಮುದ್ರಿಕೆಯ ಪ್ರಭಾವಕ್ಕೊಳಗಾಗಿ ಹರಿದಾಸರ ಸಾಹಿತ್ಯ ಹಾಗು ಸ್ವರವಚನಗಳ ಗೇಯತೆಯ ಪ್ರಭಾವದಿಂದ ಸಂಗೀತವು ಹರಿದಾಸರಲ್ಲಿ ಬೆಳೆಯಿತೆಂದು ಹೇಳುವುದೇ ಈ ಲೇಖನದ ಉದ್ದೇಶವಾಗಿದೆ.

೧೨ ನೆಯ ಶತಕದ ಕಾಲಾವಧಿಯೆಲ್ಲಾ ಬೇರೆ ಬೇರೆ ಪ್ರಯೋಗಗಳಿಂದ ತುಂಬಿ ಹೋಗಿತ್ತು. ಭಾಷೆ, ಸಾಹಿತ್ಯ, ಸಾಮಾಜಿಕ, ಧಾರ್ಮಿಕ ವಿಷಯಗಳಲ್ಲಿ ಅನಂತ ಬದಲಾವಣೆಗಳುಂಟಾದವು. ಈ ಹೊಸತನಗಳ ಅರಿವಿನಿಂದ ಅರಸೊತ್ತಿಗೆ ಕೂಡ ಅಳ್ಳಾಡುವ ಸ್ಥಿತಿಯಲ್ಲಿತ್ತು. ಪ್ರಜ್ಞಾವಂತ ಸ್ತ್ರೀ-ಪುರುಷರ ಮಧ್ಯದಲ್ಲಿ ವ್ಯವಸ್ಥಿತವಾದ ಭಕ್ತ ಭವಿ ವರ್ಗಗಳು ಹುಟ್ಟಿಕೊಂಡು ಬಿಜ್ಜಳನ ಅವಸಾನದೊಂದಿಗೆ ಶಿವಶರಣರು ನಾಡಿನ ಎಲ್ಲೆಡೆಗೂ ಚದುರಿ ಹೋದರು. ಅವರ ಕ್ರಾಂತಿಕಾರ ಸಾಹಿತ್ಯವೂ ಕೂಡ ಕಲ್ಯಾಣದಿಂದ ಹೊರಬಿತ್ತು. ಚೆಲ್ಲಾ ಪಿಲ್ಲಿಯಾಗಿ ಆಂತರಿಕ ಹೋರಾಟ. ಪ್ರತಿ ಹೋರಾಟಗಳೊಂದಿಗೆ ಪರಕೀಯರ ದಾಳಿಗಳೇನೂ ದೂರವಿದ್ದಿರಲಿಲ್ಲ. ಹೋರಾಟದೊಂದಿಗೆ ವ್ಯವಸ್ಥಿತವಾಗಿ ಬೆಳೆದಿದ್ದ ಜಾತ್ಯಾತೀತ ವೀರಶೈವ ಸಮಾಜಕ್ಕೆ ಅಗಲೆ ಬಲವಾಗಿ ನೆಲೆಗೊಂಡಿರುವ ಮೌಲ್ಯಗಳನ್ನು ಕಾಪಾಡಿಕೊಳ್ಳುವ ಅವಶ್ಯಕತೆಯಿತ್ತು. ಅಂಥ ಸಂಕ್ರಮಣಾವಸ್ಥೆಯನ್ನು ಹರಿಹರ ರಾಘವಾಂಕರು ದಿಟ್ಟತನದಿಂದ ದಾಟಿದರು. ಹತಾಶೆಗೊಂಡ ಬದುಕನ್ನು ಸಹ್ಯವಾಗಿಸಲು ಭಕ್ತಿ ಮತ್ತು ಜ್ಞಾನದಾಹ ಆಸರೆಯಾಯಿತು. ವೀರಶೈವ-ವೀರಶೈವೇತರರು ಇದೇ ಭಕ್ತಿ ಮತ್ತು ಜ್ಞಾನವನ್ನು ಪ್ರಮುಖವಾಗಿ ಸಾಹಿತ್ಯ ರಚನೆ, ರಕ್ಷಣೆಗೆ ಬಳಸಿಕೊಂಡರು.

ವೀರಶೈವ ಯತಿ ಸಿದ್ಧಲಿಂಗ ಮತ್ತು ಅವರ ಅನುಯಾಯಿಗಳ ವಿರಕ್ತರ ಬಳಗವು ಭಕ್ತಿ ಮತ್ತು ಜ್ಞಾನ ಎರಡೂ ಪ್ರಮುಖವಾಗಿ ಸಾಹಿತ್ಯ ರಚನೆ, ರಕ್ಷಣೆ ಹಾಗು ಸ್ವಧರ್ಮ ರಕ್ಷಣೆಯ ಭಾರವನ್ನು ಹೊತ್ತರು. ಈ ವೀರಶೈವ ಚಟುವಟಿಕೆಗಳ ಮಧ್ಯದಿಂದ ಮಾಧ್ವಮತ ತತ್ವವು ಪ್ರಸಾರವಾಗಬೇಕಿತ್ತು. ಹರಿದಾಸರು ಈ ಹಾದಿಯನ್ನು ಅನುಕರಣೆಯ ದೃಷ್ಟಿಯಿಂದ ಕಂಡುಕೊಂಡರು. ವಚನಕಾರರ ಅಂಕಿತ ಮುದ್ರಿಕೆಗಳಂತೆಯೆ ಪುಟ್ಟ ಸಾಲುಗಳ ಓದುವಿಕೆ ಹಾಗು ಹಾಡುವಿಕೆ ಹರಿದಾಸರಿಗೆ ಅಮೂಲ್ಯ ಪ್ರೇರಣೆಯಾದವು. ಶಿವಶರಣ ಗೇಯ ಪ್ರಧಾನ ವಚನ ಸಾಹಿತ್ಯವು ಹರಿದಾಸರಿಗೆ ಜನಪರ ಹಾಗು ಜನಪ್ರಿಯ ಹಾಡುಗಳನ್ನು ರಚಿಸಿ ಆ ಮೂಲಕ ಸಂಗೀತಪರವಾಗಿ ಪ್ರಸಾರ ಮಾಡಲು ಆಧಾರ ಸಾಮಗ್ರಿಯೊದಗಿಸಿತು.



**ಶಿವಶರಣರು ಮತ್ತು ಹರಿದಾಸರು:-** ಈ ಇಬ್ಬರ ಕಣ್ಣೆದುರು ಜನ ಸಾಮಾನ್ಯರು ಇಬ್ಬರ ಕಣ್ಣೆದುರು ಸಾಹಿತ್ಯ ರಚನೆ ಇಬ್ಬರ ಕಣ್ಣೆದುರು ಲೋಕ ತಿದ್ದುವ ಬುದ್ಧಿ; ಇಬ್ಬರ ಕಣ್ಣೆದುರು ಹೃದಯವರಳುವ ಸಂಗೀತ. ಒಂದು ಪ್ರಮುಖವಾದ ವ್ಯತ್ಯಾಸವೆಂದರೆ ಶಿವಶರಣರದು ರಚನಾತ್ಮಕ ದೃಷ್ಟಿಕೋನ; ಹರಿದಾಸರದು ತೇವಾತ್ಮಕ ದೃಷ್ಟಿಕೋನ. ಶಿವಶರಣರು ಬರಿಭಕ್ತರಾಗದೆ ಸಾಮಾಜಿಕ ಬದಲಾವಣೆಯನ್ನು ತಂದ ಕ್ರಾಂತಿಕಾರಿಗಳಾದರು. ಹರಿದಾಸರು ಕೇವಲ ಭಕ್ತರಾದರು. ಸ್ಥಿರ ಸಮಾಜವನ್ನು ಹೋರಾಟ ಮಾಡುತ್ತ ಎದುರಿಸಿ ಸಮೂಹವನ್ನು ಕಟ್ಟಿಕೊಂಡು ಸಮಾಜದಲ್ಲಿ ಬದುಕಿದವರು ಶಿವಶರಣರು. ಬದುಕಿನ ಕಷ್ಟಕ್ಕೆ ತಲೆಬಾಗಿ ಆತ್ಮೋದ್ಧಾರಕ್ಕೆ ಮನಸೋತು ಏಕಾಂಗಿಯಾಗಿ ಬದುಕಿದವರು ಹರಿದಾಸರು. ಮನೆ-ಮಕ್ಕಳನ್ನು ಕಟ್ಟಿಕೊಂಡು ಮುಮುಕ್ಷಿಯಾದವರು ಶಿವಶರಣರಾದರೆ ದೇವರನ್ನು ಕಟ್ಟಿಕೊಂಡು ಹಿಂದೆ ಹೊರಟವರು ಹರಿದಾಸರು. ಸಂಸಾರವನ್ನು ಪ್ರೀತಿಸಿದವರು ಶಿವಶರಣರಾದರೆ ಸಂಸಾರವನ್ನು ಹೇಯವೆಂದು ಗಣಿಸಿದವರು ಹರಿದಾಸರು. ಇಟ್ಟ ಆಣೆ, ಕೊಟ್ಟ ಭಾಷೆ, ಆತ್ಮಸಾಕ್ಷಿ ಅರ್ಥ ಹೊಂದಿ ಸ್ವವಿಮರ್ಶೆ ಮಾಡಿಕೊಂಡು ಸಾಮಾಜಿಕ ಸುಧಾರಣೆಯ ಗುರಿ ಹೊತ್ತು ರಚಿಸಲ್ಪಟ್ಟ ಹಾಡುಗಳು ಶರಣರವು. ತಮ್ಮ ಆತ್ಮೋನ್ನತಿ, ತಮ್ಮ ಭಕ್ತಿಗಾಗಿ, ದೇವನನ್ನೊಲಿಸಲು ಹೆಚ್ಚಿನ ಯಾವ ಗೋಜಿಗೆ ಹೋಗದೆ ರಚಿಟಲ್ಪಟ್ಟ ಹಾಡುಗಳು ದಾಸರವು.

ಹರಿದಾಸರಲ್ಲಿ ದನಿ ನಿದೆ, ಧ್ವನಿ ಇಲ್ಲ. ಶಿವಶರಣರಲ್ಲಿ ದನಿಯೂ ಇದೆ, ಧ್ವನಿಯೂ ಇದೆ. ಈ ಅರ್ಥದಲ್ಲಿ ಹರಿದಾಸರು ಸಂಗೀತವನ್ನು ಬದುಕಿದರೆ ಶಿವಶರಣರು ಸಾಹಿತ್ಯ ಮತ್ತು ಸಂಗೀತವೆರಡನ್ನೂ ಬದುಕಿದರು. ಇಂದು ಪ್ರಚಲಿತವಿರುವ ಕರ್ನಾಟಕದ ಸಂಗೀತ ಪರಂಪರೆಗೆ, ಕನ್ನಡ ಗೇಯ ಸಾಹಿತ್ಯಕ್ಕೆ ಮೂಲ ಕರ್ತರು ಕೊಂಡಗುಳಿ ಕೇಶಿರಾಜನನ್ನೊಳಗೊಂಡು ಶಿವಶರಣರೆನಿಸಿಕೊಳ್ಳುತ್ತಾರೆ ಹೊರತು ಹರಿದಾಸರಲ ಇದಕ್ಕೆ ಸಮರ್ಥನೀಯವಾಗಿ ವಚನ ಸಾಹಿತ್ಯ, ಕೊಂಡಗುಳಿಕೇಶಿರಾಜನನ್ನೊಳಗೊಂಡು ಶಿವಶರಣರೆನಿಸಿಕೊಳ್ಳುತ್ತಾರೆ ಹೊರತು ಹರಿದಾಸರಲ್ಲ. ಇದಕ್ಕೆ ಸಮರ್ಥನೀಯವಾಗಿ ವಚನ ಸಾಹಿತ್ಯ, ಕೊಂಡಗುಳಿ ಕೇಶಿರಾಜನ ಚರಿತ್ರೆ ಮತ್ತವನಕೃತಿಗಳು, ಹರಿಹರನ ರಗಳೆಗಳು, ರಾಘವಾಂಕನ ಷಟ್ಪದಿ, ೧೪-೧೫ ನೆಯ ಶತಕದ ವೀರಶೈವ ಸಾಹಿತ್ಯಕ-ಸಂಗೀತ ಚಟುವಟಿಕೆಗಳು ಉತ್ತರ ನೀಡುತ್ತವೆ. ನಂತರ ಬಂದ ಹರಿದಾಸರು ಅದರಲ್ಲಿಯೂ ಪುರಂದರದಾಸ-ಕನಕದಾಸರಂಥವರು ವಚನ ಸಾಹಿತ್ಯದ ಪ್ರಭಾವಕ್ಕೆ ಒಳಗಾದರು. ಆದರೆ ಹರಿದಾಸ ಪ್ರಿಯರೆನ್ನುವಂತೆ ಪುರಂದರದಾಸರೆ ಕರ್ನಾಟಕ ಸಂಗೀತ ಪಿತಾಮಹರಲ್ಲ.

**ವೀರಶೈವ ಸಾಹಿತ್ಯ ಸಂಗೀತ ಹಾಗು ಹರಿದಾಸರು:-** ಕೇಶಿರಾಜ, ಅಲ್ಲಮಪ್ರಭು ಬಸವಣ್ಣ, ಅಕ್ಕಮಹಾದೇವಿ, ಸಿದ್ಧರಾಮ, ಮಾರಯ್ಯ ಇವರೆಲ್ಲ ಉತ್ತಮಮಟ್ಟದ ಸಂಗೀತ ಬಲ್ಲವರಾಗಿದ್ದಾರೆಂಬುದಕ್ಕೆ ಅವರ ಕೃತಿಗಳೆಲ್ಲೆ ಪುರಾವೆಗಳಿವೆ.

ವಚನಗಳಲ್ಲಿ ವಚನ, ಸ್ವರ ವಚನ, ಬೆಡಗಿನ ವಚನವೆಂಬ ಪ್ರಕಾರಗಳಿದ್ದು ಇಲ್ಲಿಯ 'ಸ್ವರ ವಚನ' ಸಂಗೀತಕ್ಕೆ ಸಂಬಂಧಿಸಿ ಬಳಸಲ್ಪಟ್ಟಿದೆ. 'ಸ್ವರ, ಸಂಗೀತದಲ್ಲಿ ರಾಗ ತಾನಕ್ಕೆ ಅನ್ವಯಿಸಿದ ಪದ. ಅಂದರೆ ರಾಗತಾನಕ್ಕೆ ಅನ್ವಯಿಸಿದ ವಚನ ಹಾಡಲ್ಪಡಬೇಕೆಂಬುದರ ಅರ್ಥ "ಸ್ವರ ವಚನ"ಕ್ಕಿದೆ.

ಬಸವಣ್ಣ, ಮೋಳಿಗೆಯ ಮಾರಯ್ಯ ತಮ್ಮ ವಚನಗಳಲ್ಲಿ ೩೨ ರಾಗಗಳನ್ನು ಉಲ್ಲೇಖಿಸಿದ್ದಾರೆ. ೧ ಮುವತ್ತೆರಡು ರಾಗಗಳನ್ನು ವೀಣೆಯಲ್ಲಿ ಮಿಡಿಸಿದ, ಹಾಡಿದ ಬಸವಣ್ಣನ ವಚನವೊಂದನ್ನು ನೋಡಿದರೆ ವೀರಶೈವ ಸಂಗೀತ ಚಟುವಟಿಕೆಯ ಚಿತ್ರ ಪ್ರಭುದ್ಧತೆಯಲ್ಲಿರುವುದು ತಿಳಿದುಬರುತ್ತದೆ. ೨ ಹೀಗೆ ವಚನಗಳ 'ಹಾಡಿದ' ಶಿವಶರಣ-ಶರಣೆಯರ ಸಂಗೀತ ಜ್ಞಾನ ಅವರವರ ವಚನಗಳಲ್ಲಿ ವ್ಯಕ್ತವಾಗುವು-ದರಿಂದ ಶೃತಿ, ತಾಳ, ರಾಗ ವಾದ್ಯಗಳ ಮಾಹಿತಿ ವಚನಗಳಲ್ಲಿ ದೊರೆಯುವುದರಿಂದ ಸಂಗೀತದ ದೊಡ್ಡ ಚಟುವಟಿಕೆಗಳು ೧೨ ನೆಯ ಶತಕದಲ್ಲಿ ಆಗಿ ಹೋಗಿವೆ ೩. ವೀರಶೈವ ಸಂಗೀತ ಕ್ಷೇತ್ರಕ್ಕೆ ಇದು ಮೊದಲ ಘಟ್ಟವಾದಂತೆ ಗೇಯ ಪ್ರಕಾರಗಳಾದ ರಗಳೆ, ಷಟ್ಪಪದಿಯನ್ನು ಹಾಡಿದ್ದು ಸಂಗೀತದ ಎರಡನೆಯ ಘಟ್ಟ. ಹರಿಹರನಿಂದ ಆರಂಭಿಸಿ ರಾಘವಾಂಕನಿಂದ ಕುಡಿವರೆದು ಸಂಗೀತ ಕ್ಷೇತ್ರ ವಿಸ್ತಾರವಾದದ್ದು ಷಟ್ಪದಿಯಿಂದ. ಹರಿಹರನಲ್ಲಿ ರಗಳೆ ಹೃದಯಂಗಮವಾಗಿ ಹಾಡಲ್ಪಟ್ಟರೆ ಅವನ ಅಳಿಯನ ಷಟ್ಪದಿ ನಾನಾ ದಿಕ್ಕುಗಳಲ್ಲಿ ನಡೆದು ನಾನಾ ರಾಗಗಳಲ್ಲಿ ಅರಳಿಕೊಂಡು ಪುರಂದರದಾಸರ ಕಾಲಕ್ಕಾಗಲೇ ಸರಿಯಾದ ನೆಲೆಯಲ್ಲಿ ಪವಡಿಸಿಬಿಟ್ಟಿತ್ತು. ಒಟ್ಟಾರೆಯಾಗಿ ಸ್ವರ ವಚನಗಳು ಸಂಗೀತ ಕ್ಷೇತ್ರಕ್ಕೆ ಗಟ್ಟಿ ತಳಪಾಯ ಹಾಕಿಟ್ಟರೆ ರಗಳೆ ಷಟ್ಪದಿ ಭದ್ರ ಗೋಡೆಗಳನ್ನೇರಿಸಿದ್ದವು. ಇಂಥ ವೀರಶೈವ ಸಂಗೀತ ಕಟ್ಟಡಕ್ಕೆ ಕುಸುರಿ ಕೆಲಸ ಮಾಡಿದವರು ದಾಸವರೇಣ್ಯರು.

ಮಹಾಲಿಂಗದೇವ (೧೪೩೦,) ಜಕ್ಕಣಾರ್ಯ (೧೪೩೦), ಸಿದ್ಧಲಿಂಗಯತಿ (ಸು೧೫೦೦)ಯ ನೂರೊಂದು ಸ್ಥಲದ ಕೃತಿಗಳಲ್ಲಿ ಶಿವಗಣ ಪ್ರಸಾದ ಮಹಾದೇವಯ್ಯ (೧೪೨೦) ಹಲಗೆದೇವ (೧೪೯೫) ಗುಮ್ಮಳಾಪುರದ ಸಿದ್ಧಲಿಂಗ (ಸು.೧೫೦೦) ಗೂಳೂರು ಸಿದ್ಧವೀರಣ್ಣೊಡೆಯ (೧೫೨೦)ರ ಶೂನ್ಯ ಸಂಪಾದನೆಗಳಲ್ಲಿ ರಾಗತಾಳಕ್ಕನು ಸರಿಸಿ ಹಾಡಲ್ಪಡುವ ವಚನಕಾರರ ಸ್ವರವಚನಗಳು ಕಾಣಿಸಿಕೊಂಡಿವೆ.

ಚನವೀರಾರ್ಯನು (ಸು.೧೬ನೆಯ ಶತಕ) ಸಂಕಲಿಸಿದ ಶಿವಯೋಗ ಪ್ರದೀಪಿಕೆಯಲ್ಲಿ ಆಯಾ ವಚನಕ್ಕೆ ಹೊಂದುವ ರಾಗಶೀರ್ಷಿಕೆಗಳಿವೆ. ಸಂಗೀತವಿದರು ಹೀಗೆ ರಾಗಸಂಯೋಜನೆಯನ್ನೊಳಗೊಂಡ ಕೃತಿಗಳನ್ನು ತಯಾರಿಸಿ ಕೊಳ್ಳುತ್ತಿದ್ದರೆಂದು ಕಾಣುತ್ತದೆ. ಒಟ್ಟು ವೀರಶೈವ ಸಂಗೀತಕ್ಕೆ ಜೀವ ತುಂಬಿದ ಈ ಕಾಲ ವೀರಶೈವ ಸಂಗೀತದ ಮೂರನೆಯ ಮುಖ್ಯ ಘಟ್ಟ.



ಷಟ್ಪದಿಯಂತೂ ನಿಧಾನಗತಿಯಿಂದ ಹಬ್ಬುತ್ತ ಈ ಕಾಲಕ್ಕೆ ಸಂಗೀತ ಕ್ಷೇತ್ರಕ್ಕೆ ವಿಪುಲ ಗೇಯ ಸಾಹಿತ್ಯ ನೀಡಿತ್ತು. ಬೇರೆ ಬೇರೆ ರಾಗಗಳನ್ನು ಹಾಕಿಕೊಂಡು ಷಟ್ಪದಿಯನ್ನು ಹಾಡುವ ಪರಂಪರೆಯೇ, ಬಿದ್ದಿತೆಂದು ತೋರುತ್ತದೆ. ಚಾಮರಸನ ಪ್ರಭುಲಿಂಗ ಲೀಲೆಯ ಮೊದಲಿನ ಏಳು ಗಲೆಗಳಿಗೆ ಬೇರೆ ಬೇರೆ ಹಸ್ತಪ್ರತಿಗಳಲ್ಲಿ ಕಂಡು ಬರುವ ಬೇರೆ ಬೇರೆ ರಾಗಗಳನ್ನು ನೋಡಬಹುದು. ೪. ಇದರಿಂದ ನೂರಾರು ಜನ ಶಾಸ್ತ್ರೀಯ ಸಂಗೀತಗಾರರು, ಹವ್ಯಾಸಿಗರು ವೀರಶೈವ ವಚನ ಮತ್ತು ಷಟ್ಪದಿ ಸಾಹಿತ್ಯದಿಂದ ಸಂಗೀತದ ಬದುಕನ್ನು ನಡೆಸಿರಬೇಕೆನಿಸುತ್ತದೆ.

ಶಾಸ್ತ್ರೀಯ ಸಂಗೀತ ತಂಡದಂತೆ ಜಾನಪದ ಸಂಸ್ಕೃತಿಯ ಅವಿಭಾಜ್ಯ ಅಂಗವಾದ ಇಂದಿನ "ಭಜನೆ" ಮೇಳ ಆ ಕಾಲಕ್ಕೆ ಹೆಚ್ಚು ಪ್ರಚುರವಿದ್ದಿರಬೇಕು. ಹರಿದಾಸರ ಪದಗಳನ್ನು ಇಂದು ಹೆಚ್ಚಾಗಿ ಏಕತಾರಿಯಲ್ಲಿ, ಪಿಟೀಲಿನಲ್ಲಿ ಹಾಡುವುದು ಕಂಡರೆ ಭಜನೆ ಮೇಳದಲ್ಲಿ ವಚನಗಳೇ ಹೆಚ್ಚು ಪ್ರಸಾರದಲ್ಲಿವೆ. ಹರಿದಾಸರ ಪದಗಳನ್ನು ತತ್ವಪದ ಮುಂಡಿಗೆ ಎಂದು ಗ್ರಾಮೀಣ ಜನರು ಹೇಳಿಕೊಂಡು ಹಾಡುತ್ತಾರೆ. ವಚನಗಳನ್ನು ಭಜನೆಯ ಪದಗಳೆಂದು ಮೇಳದಲ್ಲಿ ಹಾಡುತ್ತಾರೆ ಹೀಗಾಗಿ "ಭಜನೆ" ವೀರಶೈವ ಧರ್ಮದ ವಿಶೇಷವೆನಿಸುತ್ತದೆ.

ಬಹುಶಃ ರಾಗ ಸಂಯೋಜನೆಯನ್ನೊಳಗೊಂಡು ರಾಗ ಶೀರ್ಷಿಕೆ ಸಹಿತ ಸ್ವರ ವಚನಗಳು ಬರೆಯಲ್ಪಟ್ಟಿರಬೇಕು. ಲಿಪಿಕಾರರು ಸಂಗಿತಜ್ಞರು ಹಾಗೆ ಪ್ರಚಾರಗೊಳಿಸಿರಬೇಕು. ಆದರೆ ಜನಪದರು ಶಾಸ್ತ್ರೀಯ ನಡೆಯಿಂದ ದೂರವಿದ್ದುದರಿಂದ ಕೇಳಿದ್ದನ್ನೆ ಪರಂಪರೆಯಾಗಿ ಉಳಿಸಿಕೊಂಡು ಭಜನೆಯಲ್ಲಿ ಜೀವಂತವಿರಿಸಿಕೊಂಡು ಬಂದಿದ್ದಾರೆ. (ಬಹುರೂಪಿಗಳು ಅಥವಾ ವೇಷಗಾರರು ಈ ದಿಸೆಯಲ್ಲಿ ಸಲ್ಲಿಸಿದ ಕೊಡುಗೆ ಅಪಾರವಿದ್ದುದನ್ನು ಗಮನಿಸಬೇಕು). ಕನ್ನಡ ಭಾಷೆಯಲ್ಲಿ ಹಾಡಲ್ಪಡುವ, ಚಿತ್ರಕಥಕನಿಂದ ಪಠಿಸಲ್ಪಡುವ ದುಂಬಿಯಂತೆ ಝೇಂಕರಿಸುವ ಷಟ್ಪದಿ ೫ ಗಿಂತ ಇವೆಲ್ಲ ಲಕ್ಷಣ ಒಳಗೊಂಡ ವಚನ-ಸ್ವರ ವಚನಗಳು ಜಾನಪದರ ಸಂಗೀತ ತಂಡವಾದ ಭಜನೆ ಮೇಳಕ್ಕೆ ಸುಲಭವಾಗಿ ಲಭಿಸಿರಬೇಕು ಗ್ರಾಮಮುಖಿಯಾದ ಈ ಭಜನೆ ಷಟ್ಪದಿಯ ಒದುಕಿನಂತೆ ಪ್ರಭಾವಶಾಲಿಯಾಗಿ ಮುಂದುವರೆದು ವಚನ ಸಾಹಿತ್ಯಕ್ಕೆ ಸಂಗೀತದ ಸೊಗಸನ್ನು ಚಿರಂತನವಾಗಿಸಿತು. ಶಿಷ್ಟಮುಖಿಯಾದ ವಚನ ಸಾಹಿತ್ಯದ ಶಾಸ್ತ್ರೀಯ ಸಂಗೀತವು ಷಟ್ಪದಿಯಷ್ಟು ಪ್ರಭಾವಶಾಲಿಯಾಗಿ ಮುಂಬರಿಯಲು ಪ್ರೋತ್ಸಾಹಕರ, ವೈಭವದ ಚಾಲನೆ ದೊರೆಯದೆ ಹೋಗಿರಬೇಕು. ಇದರಿಂದಾಗಿ "ಭಜನೆ" ವೀರಶೈವ ಸಂಗೀತದ ಕೊನೆಯ ಮತ್ತು ಚಿರಂತನ ಘಟ್ಟ ಅದು ಜಾನಪದೀಯವೆನಿಸಿದರೂ.

**ಸ್ವರವಚನ ಮತ್ತು ಷಟ್ಪದಿ ಕುರಿತು ಬಂದ ರಾಗಶೀರ್ಷಿಕೆಗಳು :-**

ಚನವೀರಾರ್ಯನು ಸಂಕಲಿಸಿದ "ಶಿವಯೋಗ ಪ್ರದೀಪಿಕೆ" ೬ ಕೃತಿಯಲ್ಲಿ 23 ವಚನಗಳಿವೆ. ಪುರಂದರದಾಸರ ಸಮಕಾಲೀನನಾದ ಈತನ ಕೃತಿಯಲ್ಲಿ ರಾಗಸೂಚಿತ ಹಾಡುಗಳಿರುವದರಿಂದ ಪುರಂದರಿಗೆ ಅವು ಮಾರ್ಗದರ್ಶಿಯಾಗಿರಲು ಸಾಕು. ೧೪30ರ ಮಹಲಿಂಗದೇವನಲ್ಲೂ ೧೧೧ ಸ್ವರ ವಚನಗಳಿವೆ. ಚನವೀರಾರ್ಯನಂಥವರಿಗೆ ಮಹಲಿಂಗನಂಥವರು ಪ್ರೇರಣೆಯಾಗಿದ್ದಲ್ಲಿ ಅನುಮಾನವಿಲ್ಲ.

ಶಿವಯೋಗ ಪ್ರದೀಪಿಕೆಯಲ್ಲಿ ೧. ಆಹರಿಪಂತು ೨. ಆಹೇರಿ ೩. ಒಡಿಯ-ಧನ್ನಾಸಿ ೪. ಕಾಂಬೋಧಿ ೫. ಕೇತಾರಗೌಳ ೬. ತೆಲುಗ ಕಾಂಬೋಧಿ ೭. ದೇಶಿ ೮. ನಾಡರಾಮಕ್ರಿ, ೯. ನಾದರಾಮಕ್ರಿ, ೧೦. ನಾರಾಯಣ ಗೌಳ ೧೧. ಪಂತುರಾವಳಿ ೧೨. ಪಹಾಡಿ ೧೩. ಭೈರವಿ ೧೪. ಮಂಗಳ ಕಾಶಿ ೧೫ ಮಧುಮಾಧವಿ ೧೬. ವರಾಳಿ ೧೭. ಶಂಕರಾಭರಣ ೧೮. ಶುದ್ಧ ಕಾಂಬೋಧಿ ೧೯. ಶ್ರೀ ೨೦. ಸಾಳಂಗ ೨೧. ಸೌರಾಷ್ಟ್ರ ಹೀಗೆ ಇಪ್ಪತ್ತೊಂದು ರಾಗ ಶೀರ್ಷಿಕೆಗಳಿವೆ.

ಡಾ|| R. C. ಹಿರೇಮಠ ಹಾಗೂ ಡಾ|| M. S. ಸುಂಕಾಪುರ ಅವರಿಂದ ಸಂಪಾದಿತವಾದ ಚಾಮರಸನ ಪ್ರಭುಲಿಂಗಲೀಲೆಯ ವಿಳುಗತಿಗಳಿಗೆ ಸಂಬಂಧಿಸಿ ಬೇರೆ ಬೇರೆ ರಾಗಶೀರ್ಷಿಕೆ ಇವೆ. ಅವುಗಳನ್ನು ಸಾಮಾನ್ಯೀಕರಿಸಿದಾಗ ೧. ಭೂಪಾಳಿ ೨. ಶಾಂತಮಲಹರಿ ೩. ದೇಶಾಕ್ಷಿ ೪. ಶಂಕರಾಭರಣ ೫. ಕುರಂಜಿ ೬. ಗುಂಡಕಿ ೭. ರಾಮಕ್ರಿ ೮. ಕಾಂಬೋಧಿ ೯. ಕಾಮೋದ್ರಿ ೧೦. ಬಹುಳಿ ೧೧. ಗುಜ್ಜರಿ ೧೨. ಚಾಳಿ ೧೩. ನಾಟಿ ೧೪. ಕೇದಾರಗೌಳಿ ೧೫. ಘಳ-ಮಂಜರಿ ೧೬. ಆಹರಿ ೧೭. ಮಾಳವಗೌಳಿ ೧೮. ವರಾಳಿ ೧೯. ತೋಂಡ-ವರಾಳಿ ೨೦. ಡೇವಗಾಂಧಾರಿ ೨೧. ಲಲಿತ ೨೨. ರೇವಗುಪ್ತಿ ೨೩. ಮಲಹರಿ ಹೀಗೆ ಇಪ್ಪತ್ಮೂರಾಗದ ಹೆಸರುಗಳಿವೆ. ಪುರಂದರದಾಸರ ಕಾಲಕ್ಕಾಗಲೆ ಬಸವಣ್ಣನ ಬತ್ತೀಸ ರಾಗಗಳಿಗಿಂತಲೂ ಹೆಚ್ಚು ರಾಗಗಳು ಕನ್ನಡಲ್ಲಿ ಪ್ರಸಾರದಲ್ಲಿದ್ದವೆಂಬುದು ಈ ನೋಟದಿಂದ ವ್ಯಕ್ತವಾಗುತ್ತದೆ.

ಚಾಲ್ತಿ ಕಾಲದಲ್ಲಿ ಹಿಂದೆ ಆದುದನ್ನು ಅನುಕರಿಸುವುದು; ಒಬ್ಬರು ಮಾಡಿದಂತೆ ಮಾಡುವುದು ಅಪರೂಪದ ಸಂಗತಿಯಲ್ಲ. ಅಂಥ ಕೆಲಸವು ಹರಿದಾಸರಿಂದ ಸಾಹಿತ್ಯ ಮತ್ತು ಸಂಗೀತಕ್ಕೆ ನಡೆಯಿತು.

ರಾಜಾಶ್ರಯದಂತಹ ದೊಡ್ಡ ಆಸರೆ ದೊರೆತಾಗ ಇಲ್ಲದ ಮಹತ್ವ ಬರುವುದು ಸರ್ವಸಾಮಾನ್ಯ. ವೈಷ್ಣವ ಸಂಪ್ರದಾಯದ ಒಡೆಯರ ಸಮ್ಮುಖದಲ್ಲಿ ಹರಿದಾಸ ಸಾಹಿತ್ಯ ಮತ್ತು ಸಂಗೀತ ದೊಡ್ಡ ಹೆಸರನ್ನು ಪಡೆದವು. ಮೊದಲಿನಿಂದಲೂ



ಸ್ವತಂತ್ರ ಮನೋಭಾವ ತೋರಿದ್ದ ವಚನ ಸಾಹಿತ್ಯವು ಪ್ರತಿಭಟನಾ ಸಾಹಿತ್ಯವಾಗಿ ಸಾಮಾನ್ಯ ಜನಮುಖಿಯಾಗಿ ಬೆಳೆದಂತೆ ದೊಡ್ಡ ಆಸರೆಯ ಬೆನ್ನ ಮರೆಯಲ್ಲಿ ಸಂಗೀತ ಸಾಹಿತ್ಯವಾಗಿ ಸಣ್ಣ ಜೀವ ಹಿಡಿದಿತ್ತು; ಶಾಸ್ತ್ರೀಯ ಗತಿಯಿಂದ ಜಾನಪದ ಭಜನೆಯಲ್ಲಿ ಮರುಹುಟ್ಟು ಪಡೆದು ಜೀವಂತವಾಗಿತ್ತು.

ಭಕ್ತಿ ಮತ್ತು ಜ್ಞಾನದಾಹದ ಜೊತೆಗೆ ವೇಳೆಯ ಅಧಿಕ ಭಾಗ್ಯ ಪಡೆದ ಹರಿದಾಸರು ತಮ್ಮ ಸಂಚಾರದುದ್ದಕ್ಕೂ ಹಾಡು ಕಟ್ಟಿದರು. ಕನಕದಾಸರಂಥವರು ಕೆಳವರ್ಗದಿಂದ ಬಂದರೂ ಹರಿದಾಸರಾಗಿ ಮೌಲಿಕವಾದ ಕೀರ್ತನೆ, ಕಾವ್ಯಗಳನ್ನು ಬರೆದರು. ಒಟ್ಟಾರೆಯಾಗಿ ಹರಿದಾಸ ಸಾಹಿತ್ಯದ ಅಂತರಂಗವನ್ನು ಪ್ರವೇಶಿಸಿದರೆ ವಚನ ಸಾಹಿತ್ಯದ ಅನುಕರಣೆ ಅದರಲ್ಲಿಯೂ ಸ್ವರವಚನಗಳ ಪ್ರೇರಣೆ ಎಲ್ಲಂದದಲ್ಲಿ ಕಂಡು ಬರುತ್ತದೆ. ಗ್ರಾಮೀಣ ಸಂಸ್ಕೃತಿಯ ಭಜನೆ ಮೇಳದೊಳಕ್ಕೆ ನುಗ್ಗಿದ ಮೌಖಿಕ ವಚನಗಳು, ಶಾಸ್ತ್ರೀಯ ಮಟ್ಟದಲ್ಲಿ ನಿಂತ ಶಿಷ್ಟ ವಚನಗಳು ನಾಡಿನ ತುಂಬ ನಾದ ತುಂಬಿದ್ದ ವೀರಶೈವ, ವೀರಶೈವೇತರ ಷಟ್ಪದಿಯ ಸಂಗೀತ ಚಟುವಟಿಕೆಗಳು ಹರಿದಾಸರ ಸಾಹಿತ್ಯ ಮತ್ತು ಸಂಗೀತ ಚಟುವಟಿಕೆಗಳಿಗೆ ಮೂಲಕಾರಣವಾದವು. ೧೫-೧೬ ನೆಯ ಶತಕದ ಸಂಕಲನಕಾರರ ವಚನ-ಸ್ವರವಚನಗಳ ಸಂಕಲನ, ರಕ್ಷಣೆ, ಸಂಗೀತದ ಮೂಲಕ ಮಾಡಿದ ಪ್ರಸಾರವು ಹರಿಧಾಸರಿಗೆ ಹೆಚ್ಚು ಪ್ರೇರಣೆ ನೀಡಿದವು.

ಇದೊಂದು ಸಂಕ್ಷಿಪ್ತ ಅವಲೋಕನ. ಹರಿದಾಸ ಸಾಹಿತ್ಯಕ್ಕೆ ವಚನ ಸಾಹಿತ್ಯ, ಹರಿದಾಸ ಸಂಗೀತಕ್ಕೆ ಸ್ವರವಚನ ಸಂಗೀತ, ಷಟ್ಪದಿಯ ಶಿಷ್ಟ ಸಂಗೀತ, ಜಾನಪದೀಯ ಭಜನೆ ಪ್ರೇರಣೆಯಾಗಿದೆ. ಕರ್ನಾಟಕದಲ್ಲಿ ಸಂಗೀತ ಬೆಳೆದು ಬಂದುದಕ್ಕೆ, ಕರ್ಣಾಟಕ ಸಂಗೀತ ಪದ್ಧತಿಗೆ ವೀರಶೈವ ಶಿವಶರಣ ಸಮೂಹ ಕಾರಣವಾಗಿದೆ.

ಇಷ್ಟು ಅಭಿಪ್ರಾಯದೊಂದಿಗೆ ೧) ಷಟ್ಪದಿಯ ಲಯಗಳನ್ನು ತನ್ನ ಹೊಟ್ಟೆಯಲ್ಲಿ ತುಂಬಿಕೊಂಡ ರಗಳೆಯು ಸಂಗೀತದ ದೃಷ್ಟಿಯಿಂದ ಕುತೂಹಲಕಾರಿಯಾಗಿದೆ. ಅದರ ವಿಸ್ತೃತ ಅಧ್ಯಯನ ನಡೆಯಬೇಕೇನೋ ಎನಿಸುತ್ತದೆ. ೨) ಪುರಂದರದಾಸರ ಕಾಲಕ್ಕೆ ಉಗಾ-ಭೋಗಗಳ ಸುಳಿವೇ ಇದ್ದಿರಲಿಲ್ಲ. ಪುರಂದರದಾಸರ ಉಗಾ-ಭೋಗಗಳೆಂದು ಹೇಳಿಕೊಂಡು ವಚನಗಳನ್ನು ಅಲ್ಪಸ್ವಲ್ಪ ತಿರುಚಿಟ್ಟು ಹಾಗೆ ಪ್ರಸಾರ ಮಾಡುವ ಪ್ರಕಟಿಸುವ ಕೃತಿಚೌರ್ಯದ ಕಾರ್ಯಕ್ಕಿಂತ ಮುಕ್ತ ಮನಸ್ಸಿನ ಸ್ವೀಕಾರ-ಅಸ್ವೀಕಾರ ತತ್ವವನ್ನಿಟ್ಟುಕೊಂಡು ಮೂಲ ಕೃತಿಕಾರರ ಶ್ರಮಕ್ಕೆ ಅಪಚಾರವಾಗದಂತೆ ದಾಸಾಭಿಮಾನಿಗಳಾಗಲಿ ಶರಣಾಭಿಮಾನಿಗಳಾಗಲಿ ದಾಸಸಾಹಿತ್ಯ ಮತ್ತು ವಚನ ಸಾಹಿತ್ಯವನ್ನು ತೌಲನಿಕವಾಗಿ ಅಧ್ಯಯನ ಮಾಡುವುದು ಅವಶ್ಯವಿದೆ ಎನಿಸುತ್ತದೆ.

## ಅಡಿಟಿಪ್ಪಣಿಗಳು :

೧. ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ
ಡಾ|| ಪಿ. ವಿ. ನಾರಾಯಣ, ಪು. ೨೯೫

೨. ಬಸವಣ್ಣನವರ ವಚನಗಳು. ವ. ೫೦೦ ಪು ೧೩೦
ಸಂ. ಬಸವನಾಳ ಶಿವಲಿಂಗಪ್ಪ

೩. ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ
ಡಾ|| ಪಿ. ವಿ. ನಾರಾಯಣ, ಪು ೨೯೫-೨೯೬

೪. ಮಾರ್ಗ ಸಂ. || ಡಾ|| ಎಂ. ಎಂ. ಕಲಬುರ್ಗಿ ಪು-೬೩೨-೬೩೩

೫. ,, ,, ,, ಪು ೬೨೪-೬೨೫

೬. ಶಿವಯೋಗ ಪ್ರದೀಪಿಕೆ. ಸಂ. ಡಾ|| ವೀರಣ್ಣ ರಾಜೂರ.

---

## ಈ ವಿಷಯಗಳಲ್ಲಿ ಎಚ್ಚರಿಕೆಯಿರಲಿ

1. ನೀರಿನಂತೆ ಸರಾಗವಾಗಿ ಮಾತನಾಡುವವನು
2. ಏನನ್ನೂ ಮಾತನಾಡದೆ ಮೌನವಾಗಿರುವವನು
3. ಕಿವಿಯ ಮೇಲೆ ತುಲಸಿ ಪತ್ರವನ್ನು ಇಟ್ಟುಕೊಂಡು ತನ್ನ ಭಕ್ತಿಯನ್ನು ಹೊರಗೆ ಪ್ರದರ್ಶಿಸುವವನು
4. ದೊಡ್ಡಮುಸುಕನ್ನು ಇಳಿಬಿಟ್ಟುಕೊಂಡ ಹೆಂಗಸು
5. ಪಾಚಿಯಿಂದ ತುಂಬಿದ ಕೊಳದ ನೀರು.

—ರಾಮಕೃಷ್ಣ ಪರಮಹಂಸರ ವಚನದಿಂದ.



## ದ್ರವ್ಯಯಜ್ಞ

ವಿದ್ವಾನ್|| ಎಂ. ಮಾಧವ ಪೈ. ೬ನೇ ಅಡ್ಡರಸ್ತೆ, ರವೀಂದ್ರನಗರ, ಶಿವಮೊಗ್ಗ.

'ಕೊಟ್ಟದ್ದು ತನಗೆ ಬಚ್ಚಿಟ್ಟದ್ದು ಪರರಿಗೆ' ಎಂಬುದೊಂದು ಹೇಳಿಕೆ ಇದೆ. ಈ ಸೂಕ್ತಿಯ ಮೂಲಕ ಕೊಟ್ಟು ಪಡೆಯುವುದು ಸುಖದಾಯಕ ಎಂಬುದನ್ನು ಮನವರಿಕೆ ಮಾಡಿ ಕೊಳ್ಳಲಾಗಿದೆ. ನೀಡುವುದರಲ್ಲಿರುವ ಸುಖ-ಸಂತೋಷ ಅಡಗಿಸಿಡುವುದರಲ್ಲಿ ಇಲ್ಲ, ತ್ಯಾಗದಿಂದಲೇ ಭೋಗವನ್ನು ಅನುಭವಿಸಬೇಕು ಎಂಬುದು-ಆತ್ಮಾನಂದದ ಸೂತ್ರ. ಹೀಗಾಗಿ ದಾನ ನೀಡುವುದು ಕೂಡ ಒಂದು ಯಜ್ಞ ಎಂದು ಗೀತಾಕಾರನು ಸ್ಪಷ್ಟಪಡಿಸಿದ್ದಾನೆ.

ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಪರೇ ।
ಸ್ವಾಧ್ಯಾಯಯಜ್ಞಾ ಜ್ಞಾನಯಜ್ಞಾಶ್ಚಯತಯಃ ಸಂಶ್ರಿತಾವ್ರತಾ ॥

ಕೆಲವರು ದ್ರವ್ಯಯಜ್ಞ ಮಾಡುತ್ತಾರೆ, ಕೆಲವರು ತಪೋಯಜ್ಞ ಮಾಡುತ್ತಾರೆ, ಇನ್ನು ಕೆಲವರು ಯೋಗಯಜ್ಞ ಮಾಡುತ್ತಾರೆ, ಮತ್ತೆ ಕೆಲವರು ಸ್ವಾಧ್ಯಾಯ ಯಜ್ಞ ಮಾಡಿದರೆ ಇನ್ನು ಕೆಲವರು ಜ್ಞಾನಯಜ್ಞ ಮಾಡುತ್ತಾರೆಯೆಂದು ಯಜ್ಞದ ವಿವಿಧ ರೂಪಗಳನ್ನು ತಿಳಿಸಿ, ಇದೆಲ್ಲವನ್ನು ಮಾಡುತ್ತಿರುವವರೆಲ್ಲರೂ ಕೂಡ ದೃಢವ್ರತಿಗಳಾಗಿರುವ ಯತಿಗಳೆ, ಶರಣರೆ ಎಂದು ವಿದಿತಗೊಳಿಸುವಲ್ಲಿ ದ್ರವ್ಯದಾನ ಮಾಡುವುದೂ ಒಂದು ಯಜ್ಞ ಎಂದು ಸಾರಿ ಹೇಳಲಾಗಿದೆ.

ದ್ರವ್ಯ ಎಂದರೆ ನಾವು ಆರ್ಜಿಸಿದುದೇನುಂಟೊ ಅದು ಇದನ್ನು ಆರ್ಜಿಸುವುದು ಕಾಯಕದಿಂದ. ಅದು ತಾನೇ ಆರ್ಜಿಸಿದುದಾಗಬೇಕು. ಬರಿದೆ ಇನ್ನೊಬ್ಬರದ್ದನ್ನು ತಂದು ನೀಡಿದರೆ ಅದು ಫಲಕಾರಿಯಲ್ಲ "ಅಹುದಹುದು ಗೆದ್ದಲು ಮನೆಯ ಮಾಡೆ ಸರ್ಪಂಗೆ ಇಂಬಾದಂತೆ ನಾನತ್ತಣ ದ್ರವ್ಯವ ತಂದು ಇತ್ತ ಮಾಡಿದರೆ ನನಗಿನ್ನೆತ್ತಣ ಮುಕ್ತಿ ? ಎಂದರಿತು ಸ್ವಯಂ ಆರ್ಜಿಸಬೇಕು. ಹಾಗೆ ಆರ್ಜಿಸುವುದು. ಒಂದು ನೇಮ ನೇಮ ನಿಷ್ಠೆಯಿಟ್ಟುಕೊಂಡು ಆರ್ಜಿಸಿದುದನ್ನು ಯಜ್ಞ ಎಂದರೆ ಹೋಮಿಸುವುದು. ಯಾವ ಕರುಣಾಸಾಗರನಿಂದ ಪಡೆದಿದ್ದೇವೊ ಆತನಿಗಾಗಿ ಆತನೇ ಆದವನಿಗೆ ದಾಸೋಹ ಭಾವನೆಯಿಂದ ಅರ್ಪಿಸುವುದು-ದಾನಿಸುವುದು ಯಜ್ಞ, ಅದನ್ನು ಹಾಗೆ ಮಾಡದೆ ಅದನ್ನು ಇನ್ನೂ ವೃದ್ಧಿಯಾಗಿಸಬೇಕೆಂದು ಬಡ್ಡಿ ಸಾಲಕ್ಕೆ ನೀಡಿದರೆ ಅದು ದುರುಪಯೋಗ ಮಾಡಿದಂತೆಯೇ ಸರಿ.

'ಹಡೆದೊಡವೆ ವಸ್ತುವನು ಮೃಡಭಕ್ತರಿಗಲ್ಲದೆ ಕಡಬಡ್ಡಿಯ ಕೊಡಲಾಗದು. ಬಂದರೊಂದು ಲೇಸು, ಬಾರದಿದ್ದರೆರಡು ಲೇಸು. ಅಲ್ಲಿದ್ದರೆಯೂ ಲಿಂಗಕ್ಕೆ ಬೋನ, ಇಲ್ಲಿದ್ದರೆಯೂ ಲಿಂಗಕ್ಕೆ ಬೋನ. ಲಿಂಗದೊಡನೆ ಲಿಂಗಕ್ಕೆ ಸಾರಿತ್ತಾಗಿ ಬಂದಿತ್ತೆಂಬ

ಪರಿಣಾಮವಿಲ್ಲ, ಭಾರದೆಂಬ ದುಃಖವಿಲ್ಲ. ಇದು ಕಾರಣ ಕೂಡಲ ಸಂಗಮದೇವಾ ನಿಮ್ಮ ಶರಣರಿಗಲ್ಲದೆ ಕಡಬಡ್ಡಿಯ ಕೊಡಲಾಗದು" ಈ ರೀತಿ ಇರ್ತರದ ಲಾಭ ದೊರಕುವಂತೆ ಅದನ್ನು ವಿನಯೋಗಿಸಬೇಕು. ಇಲ್ಲಿರ ಬೇಕಾದದು ಮುಖ್ಯವಾಗಿ ದಾಸೋಹ ಭಾವನೆ. ದಾಸೋಹ ಭಾವನೆ ಇಲ್ಲದಿದ್ದರೆ ಲಿಂಗಕ್ಕೆ ತೃಪ್ತಿ ಇಲ್ಲ. ಅದಕ್ಕೆ ನಿಷ್ಕಲಂಕ ಮನಸ್ಸು, ಉದಾರ ಭಾವನೆ ಇರಬೇಕು.

ಕೃಷಿಕೃತ್ಯ ಆವಕಾಯಕದಿಂದಾದೊಡೇನು ? ತನುಮನ ಬಳಸಿ ಗಳಿಸಿ ತಂದು, ಗುರು ಲಿಂಗ ಜಂಗಮಕ್ಕೆ ಮೆಚ್ಚಿಸಿ ದಾಸೋಹವ ಮಾಡುವ ಪರಮ ಸದ್ಭಕ್ತನ ಪಾದವ ತೋರಯ್ಯ ಎನಗೆ ಅದೆಂತೆಂದೊಡೆ ಆತನ ತನು ಶುದ್ಧ, ಆತನ ಮನ ಶುದ್ಧ, ಆತನ ನಡೆಶುದ್ಧ, ನುಡಿಎಲ್ಲ ಪಾವನವು-ಕಾರ್ಯ ಅಥವ ಕಾಯಕ ಯಾವುದೇ ಇರಲಿ, ನಾನು ಮಾಡುತ್ತೇನೆ, ನಾನುಮಾಡಿದೆ ಎಂಬ ಅಹಂಭಾವವನ್ನು ಪ್ರದರ್ಶಿಸದೆ, ತಾನು ನಿಮಿತ್ತ ಮಾತ್ರ, ಮಾಡುವವನು-ಮಾಡಿಸುವವನು ಎರಡು ಆ ಪರಶಿವನೇ ಹೊರತು ನಾನಲ್ಲ ಎಂಬ ಭಾವನೆಯಿಂದ ಮಾಡಿದ ಕಾರ್ಯಗಳೆಲ್ಲವೂ ಯಜ್ಞವೇ ಆಗಿರುತ್ತದೆ. ಪರಿಶ್ರಮಿ, ದುಃಖಿ ಮಾನವ ಸದಾ ಲೋಕದ ಕೋಟ್ಯಾಂತರ ಜನತೆಯಲ್ಲಿ ಒಬ್ಬ ಸಖನ, ಸ್ನೇಹಿತನ ನಿರೀಕ್ಷೆಯಲ್ಲಿರುತ್ತಾನೆ. ಹೀನದೀನಾವಸ್ಥೆ ಪ್ರಾಪ್ತವಾದಾಗ ತಾನು ಹಾರೈಸುವ ಆ ಸ್ನೇಹಿತನ ಸಹಾಯ ಹಸ್ತದ ಅವಲಂಬನದ ಆವಶ್ಯಕತೆ ಆತನಿಗೆ ಇರುತ್ತದೆ. ಸಕಾಲದಲ್ಲಿ ಸ್ನೇಹಿತನ ಸಹಾಯದ ಹಸ್ತದೊರಕಿತೆಂದರೆ ಆ ಹಸ್ತವೇ ಆತನಿಗೆ ಪರಮಾತ್ಮನ ಅಭಯ ಹಸ್ತವೇ ಆಗಿ ಪರಿಣಮಿಸುತ್ತದೆ. ಹೀಗಿರುವಾಗ ನಮ್ಮ ಹತ್ತಿರವಿರುವ ದ್ರವ್ಯವನ್ನು ನಾವು ಆವಶ್ಯಕತೆ ಇರುವವರಿಗೆ ನೀಡುವಾಗ "ನಾನು ನೀಡುತ್ತೇನೆ" ಎಂಬ ಅಹಂಕಾರವನ್ನು ತ್ಯಜಿಸಿ ನೀಡಿದರೆ ಆಗಕೊಟ್ಟ ದ್ರವ್ಯ ದಾನ ದ್ರವ್ಯಯಜ್ಞವಾಗುತ್ತದೆ. ಅಂದರೆ ಅಹಂಭಾವವನ್ನು ತ್ಯಜಿಸಿ ದಾಸೋಹಂಭಾವವಿರಬೇಕು. ಸೋಹಂ ಎಂದಡೆ ಅಂತರಂಗದ ಗರ್ವ, ಶಿವೋಹಂ ಎಂದೊಡೆ ಬಹಿರಂಗದ ಅಹಂಕಾರ. ಈ ಉಭಯವನಳಿದು ದಾಸೋಂ ಭಾವವನೆ ಕರುಣಿಸಿ ಬದುಕಿಸಯ್ಯ ಅಖಂಡೇಶ್ವರಾ ಎಂಬ ವಿನೀತಭಾವ.

ಬದುಕಿನಲ್ಲಿ ನೀಡುವುದು ಎಂಬುದೂ ಒಂದು ಮಹತ್ತರ ಗುಣ, ಇದೊಂದು ವಿಶಿಷ್ಟ ಕಲೆ ಈ ಕಲೆಯಲ್ಲಿ ಪರಿಣತರಾದವರು ಅತಿ ವಿರಳ. ಹಲವು ಉದ್ದೇಶದಿಂದ ನೀಡುವವರು ಹಲವರು-ಮಾಡಿದ ಪಾಪವನ್ನು ಮುಚ್ಚಿಡುವುದಕ್ಕಾಗಿ ಅಥವಾ ಆಪಾಪದಿಂದ ಮುಕ್ತರಾಗುವುದಕ್ಕಾಗಿ ಕೆಲವರು ದಾನನೀಡಬಹುದು. ಆದರೆ ಇದು "ಓಡಲಾಗದ ಮೃಗವು ಸೊಣಗಂಗೆ ಮಾಂಸವಕೊಡುವಂತೆ'ಯಲ್ಲದೆ ಬೇರಲ್ಲ. ಇನ್ನು ಕೆಲವರು ಹೆಸರುಗಳಿಸುವುದಕ್ಕಾಗಿ, ಯಶಸ್ಸಂಪಾದನೆಗಾಗಿ ದಾನವೆರೆಯಬಹುದು. ಮತ್ತೆ ಕೆಲವರು ಬಂದಿದ್ದಾನಲ್ಲ, ಇನ್ನೇನು ಮಾಡುವುದು ಎಂದೊ, ಇವರ ಕಾಟದಿಂದ



ಪಾರಾದರೆ ಸಾಕು ಎಂದೊ ತನ್ನ ಗೌರವಕ್ಕೆ ಹಾನಿಬಾರದಿರಲಿ ಎಂಬ ಭಾವನೆಯಿಂದಲೊ ತನ್ನಡೆಗೆ ಯೋಚಿಸಿ ಬಂದವರಿಗೆ ತನ್ನಲ್ಲಿರುವ ಧನವನ್ನು ನೀಡಬಹುದು ಅಥವಾ ತಾನು ಮಹಾದಾನಿ ಎಂಬ ಗೌರವಕ್ಕೆ ಪಾತ್ರರಾಗಲು ನೀಡಬಹುದು ಈ ರೀತಿಯ ನೀಡುವಿಕೆಯಿಂದ ಧನದ ಅನುಚಿತ ಬಳಕೆಯಾದಂತೆಯೇ ಸರಿ-

"ಬಲಿಯ ಭೂಮಿ ಕರ್ಣನಕವಚ ಖಚರನ ಅಸ್ತಿ,
ಶಿಬಿಯ ಮಾಂಸ ವೃಥಾ ಹೋಯಿತ್ತಲ್ಲಾ !
ಕೂಡಲ ಸಂಗನ ಶರಣರನರಿಯದೆ ಕೀರ್ತಿವಾರ್ತೆಗೆ
ಮಾಡಿದವನ ಧನವು ವೃಥಾ ಹೋಯಿತ್ತಲ್ಲಾ !
ಶಿವಭಕ್ತಿಮತಿಶ್ರವ್ಯಯದ್ ದಾನಂ ಚ ವಿಧಿಯತೇ
ನಿಷ್ಫಲಂತು ಭವೇದ್ ಧ್ಯಾನಂ !
ರೌರವಂ ನರಕಂವ್ರಜೇತ್! ಇಂತೆಂದುದಾಗಿ ಕೂಡಲ ಸಂಗನ ಶರಣರನರಿಯದೆ
ಕೀರ್ತಿವಾರ್ತೆಗೆ ಮಾಡಿದವನ ಧನವು ವೃಥಾ ಹೋಯಿತಲ್ಲಾ !

ಎಂಬಂತೆ ಇದು ಯಜ್ಞವೆಂದೆನಿಸಿಕೊಳ್ಳುದಿಲ್ಲ ತಾನು ನೀಡುತ್ತಿರುವುದು ನರರೂಪಿ ನಾರಾಯಣನಿಗೆ, ಇದೆಲ್ಲವೂ ಪರಮೇಶ್ವರನಿಗೆ ಅರ್ಪಣ ಎಂಬ ನಿಷ್ಕಲ್ಮಶ ಪರಿಶುದ್ಧ ಮನಸ್ಸಿನಿಂದ ಮಾಡಿದ ದಾನವಮಾತ್ರ ಯಜ್ಞವೆಂದೆನಿಸಿಕೊಳ್ಳುತ್ತದೆ. ನಮ್ಮ ಹತ್ತಿರ ಯಾಚಿಸಿ ಬರುವವನು ಭಗವಂತನೇ ಆಗಿರುತ್ತಾನೆ. ದೀನನೂ, ದುರ್ಬಲನೊ, ನಿರ್ಬಲನೊ, ಬಡವನೊ, ರೋಗಿಯೋ ಮತ್ತಾವುದೋ ರೂಪದಲ್ಲಿ ಆತ ನಮ್ಮೆಡೆಗೆ ನಮ್ಮನ್ನು ಪರೀಕ್ಷಿಸಲು ಬರುತ್ತಾನೆ. ಇಂತಹವರಿಗೆ ನೀಡುವುದೆಲ್ಲವೂ ಕೊನೆಗೆ ಆ ಪರಮೇಶ್ವರನಿಗೇನೇ ಸಂದಾಯವಾಗುತ್ತದೆ. ನೀಡುವುದಕ್ಕಾಗಿಯೇ ಅವನು ನಮಗೆ ಹಲವು ರೀತಿಯ ಈ ಅವಕಾಶಗಳನ್ನು ಹೊಂದಿಸಿ ಕೊಡುತ್ತಿದ್ದಾನೆ ಎಂಬ ಕಳಕಳಿ ನಮ್ಮಲಿರಬೇಕು. ಶಿವನೇ ರೂಪಾಂತರದಿಂದ ಬಂದಿರುತ್ತಾನೆಂದರಿಯಬೇಕು. ಅದು ಬಿಟ್ಟ ಸನಿಹಕ್ಕೆ ಬಂದವರನ್ನು ಕಡೆಗಣಸಿ, ಅನ್ಯತ್ರ ಹುಡುಕ ಹೋಗಿ ಬುದ್ಧಿಗೆಡಬಾರದು ಕಾಣ ಕಾಣುತ್ತಾ ಕಡೆಗಣಿಸಿ ಅರಸುವ ಮತಿಭ್ರಷ್ಟ ನಾನು ಲಿಂಗಯ್ಯ, ತನು ಲೋಭ, ಮನಲೋಭ, ಧನಲೋಭ, ಮುಂದುಗೆಡಿಸಿ ಕಾಡಿತ್ತೆನ್ನ ಎಂದಂತಾಗಬಾರದು. ಹಾಗಾಗದೆ ಬಂದವರೆಲ್ಲರೂ ಶಿವಭಕ್ತರು, ಶಿವನ ಶರಣರು, ಶಿವನೇ ಆಗಿರುವವರು. ಅಂತವರ ಮಗ ನಾನು ಎಂಬ ಭಾವನೆ ಬಲಿಯ ಬೇಕು. ತನು ಮನಧನವ ಶಿವಂಗೆ ನಿವೇದಿಸಿದ ಭಕ್ತರ ಮನೆಯ ಮಗ ನಾನಯ್ಯ ಕೂಡಲ ಸಂಗಮದೇವಾ. ಬೇಡುವವಂ ಸಂಗಂ, ನೀಡುವವಂ ಸಂಗಂ ಎಂಬುದನ್ನು ನಾವು ಮರೆಯಬಾರದು. ಹೀಗೆ ನೀಡುವುದರಿಂದ ಪಡೆದವನಲ್ಲ ಇಲ್ಲಿ ಉದ್ಧಾರವಾಗುವುದು, ನೀಡುವವನು ನೀಡಿ ಉದ್ಧಾರವಾಗುವವನು ಅಖಿಲಾಂಡಕೋಟಿ ನಿಖಿಲ ಬ್ರಹ್ಮಾಂಡದ ಒಡೆಯನಾದ

ಆ ಪರಮೇಶ್ವರನಿಗೆ ನಮ್ಮಿಂದ ಪಡೆಯಬೇಕಾದುದೇನೂ ಇಲ್ಲ. ಅಥವಾ ಕೊಡುವವರಾದರೂ ನಾವು ತಂದುದೆಲ್ಲಿಂದ? ನಮ್ಮದುಯಾವುದು ಇಲ್ಲ; ಬಸವಣ್ಣನವರ ನುಡಿ ಆಲಿಸಿ "ನೀಕೊಟ್ಟ ದ್ರವ್ಯ ನಿಮಗಲ್ಲದೆ ಮತ್ತೊಂದು ಕ್ರೀಯ ಮಾಡೆನು, ನಿಮ್ಮ ಸೊಮ್ಮಿಂಗೆ ಸಲಿಸುವೆನು, ನಿಮ್ಮಾಣೆ ಕೂಡಲ ಸಂಗಮದೇವ, ಎಂಬ ಅರಿವು ಇರಬೇಕು. ನಮ್ಮ ಹೃನ್ಮನಗಳು ವಿಕಾಸವಾಗಲು, ಕೈಯೆತ್ತಿ ನೀಡಲು ಅನೇಕ ಅವಕಾಶಗಳನ್ನು ಹಲವು ಪರಿಯಿಂದ ಆತನು ನಮಗೆ ಕಲ್ಪಿಸುತ್ತಿದ್ದಾನೆಂಬ ದೃಷ್ಟಿಯಿಂದ ನೀಡಿದುದೆ ದ್ರವ್ಯಯಜ್ಞವಾಗಿ ಪರಿಣಮಿಸುತ್ತದೆ. ಹಾಗೆಯೇ ನಾವು ಕೊಟ್ಟದ್ದೂ ಸಾರ್ಥಕವಾಗುತ್ತದೆ. ಅದು ಬಿಟ್ಟುನಾನು ಮಹಾದಾನಿಯೆಂದು ಮೆರೆದರೆ, ಗರ್ವಿಸಿದರೆ ಆತ ದಾನಿಯೆಂದೆನಿಸಿಕೊಳ್ಳುವುದಿಲ್ಲ "ಕೈದ ಹಿಡಿದಾಡುವರೆಲ್ಲಾ ಇರಿವರೆ? ಸಾಧನೆಯ ಮಾಡಬಲ್ಲವರೆಲ್ಲರೂ ಕಾದಬಲ್ಲರೆ? ಅರ್ಥಿಗೆ ಮಾಡುವ ಕೃತ್ಯವಂತರೆಲ್ಲ ಭಕ್ತರಪ್ಪರೆ? ಅದು ಚಂದೇಶ್ವರ ಲಿಂಗಕ್ಕೆ ಮುಟ್ಟದ ಮಾಟ"

ನೀಡುವುದು, ದಾನಮಾಡುವುದು ಒಂದು ಕಲೆಯೆಂಬುದನ್ನು ಆಗಲೇ ಹೇಳಿದೆ. ಈ ಕಲೆಯಲ್ಲಿ ಪರಿಣತರಾಗಬೇಕಾದುದು ನಮ್ಮ ಆದ್ಯ ಕರ್ತವ್ಯ. ಅದಕ್ಕಾಗಿ ನೀಡುವಾಗ ಹೇಗೆ ನೀಡ ಬೇಕು ಎಂಬುದರ ತಿಳಿವಳಿಕೆ, ಅರಿವು ನಮಗುಂಟಾದರೆ ಆ ಕಲೆಯಲ್ಲಿ ಯಶಸ್ಸುಗಳಿಸಬಹುದು, ಇದಕ್ಕಾಗಿ ತೈತ್ತರೀಯೋಪನಿಷತ್ತಿನ ಈ ಸೂಕ್ತಿಗಳು ಮನನೀಯವಾಗಿವೆ. ಶ್ರದ್ಧಯಾದೇಯಮ್। ಅಶ್ರದ್ಧಯಾದೇಯಮ್। ಶ್ರಿಯಾದೇಯಮ್। ಹ್ರಿಯಾದೇಯಮ್। ಭಿಯಾದೇಯಮ್। ಸಂವಿದಾದೇಯಮ್ ಶ್ರದ್ಧೆಯಿಂದ ಕೊಡಬೇಕು, ಅಶ್ರದ್ಧೆಯಿಂದ ನೀಡಬಾರದು, ತನ್ನ ಐಶ್ವರ್ಯಕ್ಕನುಗುಣವಾಗಿ ಕೊಡಬೇಕು. ವಿನಯದಿಂದ ಕೊಡಬೇಕು, ಭಯದಿಂದ ನೀಡಬೇಕು, ಮಿತ್ರ ಭಾವನೆಯಿಂದ ನೀಡಬೇಕು, ತಾನು ನೀಡುವುದು ಒಂದು ಯಜ್ಞವೆನಿಸಿಕೊಳ್ಳಬೇಕಾದರೆ ಈ ರೀತಿಯ ಭಾವನೆ ಇರಬೇಕು.

ಯಾವುದನ್ನೇ ನಾವು ನೀಡುವುದನ್ನು ಶ್ರದ್ಧೆಯಿಂದ ನೀಡಬೇಕು. ಇದೊಂದು ಕಾಟಾಚಾರವೆಂದು ಭಾವಿಸಿ ನೀಡಬಾರದು ಅಥವಾ ನನಗೇ ಸಾಕಷ್ಟು ಇಲ್ಲ, ಇನ್ನುಳಿದವರಿಗೆ ಕೊಡುವುದೆಲ್ಲಿಂದ ಎಂದು ತಿರಸ್ಕರಿಸಬಾರದು. ಕೊಡುವ ಶುದ್ಧ ಮನಸ್ಸು ಇರಬೇಕು. "ಮನಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ, ಚಿತ್ತಶುದ್ಧದಲ್ಲಿ ಕಾರ್ಯವ ಮಾಡುವಲ್ಲಿ ಸದ್ಭಕ್ತಂಗೆ ಎತ್ತ ನೋಡಿದಡತ್ತ ಲಕ್ಷ್ಮಿ ತಾನಾಗಿಪ್ಪಳು" ಕೊಡುವುದು ಎಂದರೆ ಅದು ನಾನು ಮಾಡುವ ಶಿವಪೂಜೆ. ಆದರಿಂದ ನಾನು ಉದ್ಧಾರವಾಗುತ್ತೇನೆ. ಇದೊಂದ ನನಗೆ ಸಿಕ್ಕಿದ ಸದವಕಾಶವೆಂದು ಭಾವಿಸಬೇಕು ಆದರೆ ಅಲ್ಲಿ ಅಹಂಭಾವವಿರಬಾರದು, ಜೊತೆಗೆ ನೀಡುವಾಗ ಒಂದು ಕಣ್ಣಿಗೆ ಬೆಣ್ಣೆ, ಒಂದು ಕಣ್ಣಿಗೆ ಸುಣ್ಣವೆಂಬಂತೆ ಭೇಧ ಭಾವವನ್ನು ತೋರಿಸಬಾರದು ಪಾತ್ರಾಪಾತ್ರವೆಂದು ವಿಭಜಿಸಬಾರದು, ಎಲ್ಲರನ್ನು ಸಮಾನವಾಗಿ ಪರಶಿವ ಪ್ರತಿರೂಪವಾಗಿ-ಕಂಡು ನೀಡಬೇಕು.



ಅರಿದರಿದು! ಸಮಗಾಣಿಸಬಾರದು. ತ್ರಾಸಿನ ಕಟ್ಟಳೆಯಂತಿನಿತು ವೆಗ್ಗಳವಾದರೆ ಈಶ್ವರನೊಡೆಯಿಕ್ಕದೆ ಮಾಣುವನೆ? ಪಾತ್ರ ಅಪಾತ್ರವೆಂದು ಕಂಡರೆ ಶಿವನೆಂತು ಮೆಚ್ಚುವನು? ಜೀವ ಜೀವಾತ್ಮವಸರಿಯೆಂದು ಕಂಡರೆ ಸಮವೇದಿಸದಿಪ್ಪನೆ ಶಿವನು? ತನ್ನ ಮನದಲ್ಲಿ "ಯತ್ರಜೀವ ಸ್ತತ್ರಶಿವ" ನೆಂದು ಸರ್ವಜೀವ ದಯಾಪಾರಿಯಾದಲ್ಲಿ ಕೂಡಲ ಸಂಗಮದೇವನು ಕೈಲಾಸದಿಂದ ಬಂದು ಎತ್ತಿಕೊಳ್ಳದಿಪ್ಪನೆ"? ಅದೇರೀತಿ ನಾನು ಕೊಡದಿದ್ದರೆ ಪಡೆಯುವವನಿಗೆ ನೀಡುವವರು ಇನ್ಯಾರೂ ಇಲ್ಲವೆಂದು ಭಾವಿಸಬಾರದು. ನಾನು ಕೊಡುವುದರಿಂದಲೇ ಉದ್ಧಾರವಾಗುವಾತ ನೀತ ಎಂದು ತಿಳಿಯಬಾರದು. ನನ್ನಿಂದಲ್ಲ ಆತನುದ್ಧಾರವಾಗುವುದು, ಸಕಲೋದ್ಧಾರಕನೇ ಆತನಿಗೂ ಉದ್ಧಾರಮಾಡುವವನಾಗಿದ್ದಾನೆ, ನಾನು ನಿಮಿತ್ತಮಾತ್ರನು ಎಂದು ಅರಿತುಕೊಳ್ಳಬೇಕು. ಬಂದವರ ಮನನೋಯದಂತೆ ನೀಡಬೇಕು-ನಡೆಯಲರಿಯದೆ ನುಡಿಯಲರಿಯದೆ ಲಿಂಗವ ಪೂಜಿಸಿ ಫಲವೇನು? ಅವರ ಸುಖವೆನ್ನ ಸುಖ ಅವರ ದುಃಖವೆನ್ನ ದುಃಖ! ಕೂಡಲ ಸಂಗನ ಶರಣರ ಮನನೊಂದರೆ ಆನು ಬೆಂದೆನಯ್ಯಾ ಎಂಬುದನರಿಯಬೇಕು.

ಎರಡನೆಯದಾಗಿ ಐಶ್ವರ್ಯಕ್ಕನುಗುಣವಾಗಿ ನೀಡಬೇಕು; ತನ್ನ ಯೋಗ್ಯತೆಗನುಸಾರವಾಗಿ ನೀಡಬೇಕು. ಇದಕ್ಕೆ ವಿರುದ್ಧವಾಗಿ ಕಡಮೆ ಕೊಟ್ಟಲ್ಲಿ ಅದೊಂದು ಅವಮಾನ. ಅನ್ಯರೂ ಕೂಡ ನಾನು ಕೊಟ್ಟ ಅಲ್ಪವನ್ನು ನೋಡಿ, ಹೆಚ್ಚು ಕೊಡಬೇಕೆಂದಿದ್ದವರೂ ಕೂಡ ಕಡಮೆ ಕೊಡುವಂತವರಾಗುತ್ತಾರೆ; ಕಡಮೆ ಕೊಡುತ್ತಾರೆ. ನನ್ನ ಜಿಪುಣತನ ಅನ್ಯರ ಮೇಲೂ ಪ್ರಭಾವ ಬೀರುತ್ತದೆ. ಆದ್ದರಿಂದ ನೀಡುವಾಗ ಔದಾರ್ಯಕ್ಕೆ ಮೇಲ್ಪಂಕ್ತಿಯಾಗಬೇಕು

ಮೂರನೆಯದಾಗಿ ವಿನಯದಿಂದ ನೀಡಬೇಕು. ನೀಡುವಾಗ ಅಹಂಕಾರವಿರಬಾರದು; ಅಟ್ಟಹಾಸ ಮೆರೆಸಬಾರದು. ನನ್ನ ಸಮಾನ ದಾನಿ ಇಲ್ಲ ಎಂದು ಮರೆಯಬಾರದು ನನಗಿನ್ನೂ ಹೆಚ್ಚು ನೀಡಲು ಸಾಧ್ಯವಾಗಲಿಲ್ಲವಲ್ಲ ಎಂದು ಚಡಪಡಿಸುತ್ತಿರಬೇಕು. 'ಮನದ ಮತ್ಸರವ ಕಳೆದು, ಮನದ ಕೊನೆಯ ಮೊನೆಯ ಮೇಲೆ ಲಿಂಗವ ಕುಳ್ಳಿರಿಸಿ" ದಾಸೋಹಿಯಾಗಿ ನೀಡಬೇಕು.

ನಾಲ್ಕನೆಯದಾಗಿ ನೀಡುವುದೇನಿದ್ದರೂ ಮಿತ್ರಭಾವದಿಂದ ನೀಡಬೇಕು. ಎತ್ತರದಲ್ಲಿ ನಿಂತು ಗುಂಡಿಯಲ್ಲಿದ್ದವನಿಗೆ ಎಸೆಯುವಂತೆ ಇರಬಾರದು. ಸ್ವೀಕರಿಸುವವನಿಗಿಂತ ಮೇಲೆ ಇದ್ದೇನೆ ಎಂದು ಭಾವಿಸಬಾರದು, ಎಲ್ಲರೂ ಒಂದೇ. ಏನೋ ತನಗೆ ನೀಡುವ ಸ್ಥಿತಿಯೊದಗಿದೆಯೆಂದು ಭಾವಿಸಿ, ಸ್ವೀಕರಿಸುವಾತನನ್ನು ಮಿತ್ರನಂತೆ ಕಾಣಬೇಕು. ಎಲ್ಲರೂ ಪರಮಾತ್ಮನ ಮಕ್ಕಳು, ನಾವೆಲ್ಲರೂ ಅಣ್ಣ-ತಮ್ಮಂದಿರು, ಬಂಧು-ಭಗಿನಿಯರು ಯಾರೂ ಶ್ರೇಷ್ಠರಲ್ಲ, ಯಾರು ಕನಿಷ್ಠರಲ್ಲ ಎಂಬಾ ಭಾವನೆ.

ಯಿದ್ದರೇನೇ ದ್ರವ್ಯದಾನ ದ್ರವ್ಯಯಜ್ಞವೆಂದೆನಿಸಿಕೊಳ್ಳುತ್ತದೆ ಎಂದು ಬೋಧಿಸಿದ ಈ ವಾಕ್ಯಗಳು ಚಿಂತನೀಯವಾಗಿವೆ; ಆತ್ಮಾನಂದಕ್ಕೆ ಸಾಧನವಾಗಿದೆ. ಹಾಂ! ಇನ್ನೊಂದು ವಿಷಯ ನೆನಪಿರಲಿ ಕೊಡುವುದನ್ನು ಸಕಾಲದಲ್ಲಿ ಕೊಡಬೇಕು. ಅದರಿಂದ ಪಡೆದವನ ಸಂಕಷ್ಟ ದೂರವಾದೀತು! ಬೆಳೆ ಒಣಗಿದ ಮೇಲೆ ಮಳೆ ಸುರಿದರೆ ಪ್ರಯೋಜನವೇನು? ಜೊತೆಗೆ ನಾನು ಕೊಟ್ಟೆ, ನಾನು ಮಾಡಿದೆ ಎಂಬ ಗರ್ವವೂ ಬಾರದಿರಲಿ. ನಿಷ್ಕಾಮ ಭಾವನೆಯಿಂದ, ನಿಸ್ವಾರ್ಥಭಾವದಿಂದ ಮಾಡಿದಾಗಲೇ ಕೊಟ್ಟದ್ದು, ಮಾಡಿದ್ದು ಫಲದಾಯಕವಾಗುತ್ತದೆ ಎಂಬ ಅರಿವೂ ಇರಲಿ-ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ। ಮಾಡಿದೆನೆನ್ನದಿರಾ ಜಂಗಮಕ್ಕೆ; ಮಾಡಿದೆನೆಂಬುದು ಮನದಲ್ಲಿಲ್ಲದಿದ್ದರೆ ಬೇಡಿತ್ತನೀವ ಕೂಡಲ ಸಂಗಮದೇವಾ ॥

"ಆವಕಾರ್ಯವಾದಡೂ ಪ್ರಾಣವೇಕಡೆಯಾಗಿ, ದ್ರವ್ಯಕಡೆಯಾಗಿ ಚಿತ್ತಶುದ್ಧದಲ್ಲಿ ಬಂದುದಕ್ಕೆ ಸರಿಗಂಡು ದೇಹಿಗಳಿಗೆ ಒಂದೇ ಪ್ರಮಾಣದಲ್ಲಿ ಸರಿಗಂಡುದು ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗಕ್ಕೆ ತೃಪ್ತಿ"






# ಪುಸ್ತಕ ಅಧ್ಯಯನದ ಮಹತ್ವ

ಲೇಖಕ:- ಬಿ. ಎಸ್. ಕೃಷ್ಣಮೂರ್ತಿ, ನಂ 5, ಸೀತಾವಿಲಾಸರಸ್ತೆ, ಮೈಸೂರು-570 024.

ವಿದ್ಯಾಭ್ಯಾಸದಲ್ಲಿ ನಿರತರಾದವರು ತಮ್ಮ ತರಗತಿಯ ಪಾಠಗಳ ಜೊತೆಯಲ್ಲಿ-ತಮ್ಮ ಜ್ಞಾನ ಜ್ಯೋತಿಯನ್ನು ಉಜ್ವಲಗೊಳಿಸಬೇಕು. ಹೀಗಾಗಲು ಉಪಯುಕ್ತ ಪ್ರಗತಿ ಶೀಲ ಗ್ರಂಥಗಳನ್ನು ಬಿಡುವಿನ ವೇಳೆಯಲ್ಲಿ ಓದಬೇಕು. ಪರೀಕ್ಷೆಗಾಗಿ ಸಿದ್ಧಪಡಿಸಿರುವ ಪುಸ್ತಕಗಳಿಂದ ಮಾತ್ರ ಸಾರಭೂತ ದಿವ್ಯ ಜ್ಞಾನ ಲಭಿಸುವುದಿಲ್ಲ. ಜ್ಞಾನವೃದ್ಧಿ, ಭಾವಪರಿಶೋಧನೆ, ಆತ್ಮಾನಂದಕ್ಕೆ ಉತ್ಕೃಷ್ಟ ಲೇಖಕರ ಗ್ರಂಥಗಳ ಅಧ್ಯಯನ ನಡೆಸಬೇಕಾಗಿದೆ. ಆ ಗ್ರಂಥಗಳಲ್ಲಿ ಅನುಭವ ಪೂರ್ಣವಿಚಾರಗಳ ವಿಷಯ ನಿರೂಪಣೆ ಇರುತ್ತವೆ. ಅದರ ಅಧ್ಯಯನದಿಂದ ವಿಚಾರ ಶಕ್ತಿ ಉಕ್ಕಿ, ಓದುಗರ ಮನಸ್ಸಿನ ಮೇಲೆ ಪರಿಣಾಮ ಬೀರುವುದು. ಇದರಿಂದ ಜ್ಞಾನ ವೃದ್ಧಿಗೆ ಮಾರ್ಗವಾಗುತ್ತದೆ.

ನಾವು ಯಾವರೀತಿಯಲ್ಲಿ ಮಿತ್ರರೊಂದಿಗೆ ವಿಮರ್ಶಿಸಿ ಅವರಿಂದ ವಿಷಯಸಂಗ್ರಹಮಾಡುತ್ತೇವೋ ಅದರಂತೆ ನಾನಾಬಗೆ ಗ್ರಂಥದ ಪಠಣೆಯಿಂದಲೂ ಜ್ಞಾನಲಾಭವಾಗುವುದು ಗ್ರಂಥಗಳಲ್ಲಿ ಸಂದರ್ಭಕ್ಕೆ ತಕ್ಕಂತೆ ಸುಖ, ದುಃಖ ಸಂತೋಷ, ನೋವು, ನಲಿವು ಇವುಗಳನ್ನು ಹೊರಚೆಲ್ಲುತ್ತವೆ.

ಗ್ರಂಥಗಳಲ್ಲಿ ಮನೋರಂಜನೆಯ ಭಾಗ, ಜ್ಞಾನಾರ್ಜನೆಯ ಭಾಗ, ತತ್ವೋಪನಿರ್ದೇಶನದಭಾಗ, ಇವುಗಳೆಲ್ಲವು ಇರುವುದರಿಂದ ಇವೆಲ್ಲವೂ ಸಂಗ್ರಹಯೋಗ್ಯವೇ ಆಗಿವೆ! ಗ್ರಂಥಗಳ ಓದಿನಿಂದ ಸಮಾಜ ವಿಜ್ಞಾನ, ಪ್ರಕೃತಿ ವಿಜ್ಞಾನ, ಮನೋವಿಜ್ಞಾನ, ಶಾಸ್ತ್ರ ವಿಜ್ಞಾನ, ರಾಜಕೀಯ ವಿಜ್ಞಾನ ಇವುಗಳ ಪರಿಚಯವಾಗಿ ಓದುಗರ ಅನುಭವ ಕುದುರಿಸಲು ಶಕ್ತಿದಾಯಕವಾಗಿವೆ.

ಓದಿನ ಸಾಲಿಗೆ ಕತೆ, ಕಾದಂಬರಿ, ನಾಟಕ, ಪ್ರಬಂಧ, ಉಪನ್ಯಾಸ, ಜೀವನ ಚರಿತ್ರೆ, ಕಾವ್ಯ, ಪುರಾಣ, ಭೂಗೋಳ ಚರಿತ್ರೆ, ಪುರಾಣ, ತರ್ಕಶಾಸ್ತ್ರ, ವೇದಾಂತ ಅರ್ಥಶಾಸ್ತ್ರ, ಅಲಂಕಾರ ಶಾಸ್ತ್ರ. ಛಂದಸ್ಸು, ವೈದ್ಯಕೀಯ ವಿಜ್ಞಾನ, ವ್ಯಾಕರಣ, ಇವುಗಳನ್ನೆಲ್ಲಾ ಓದುವುದು ನಿಚ್ಚಳ ಜ್ಞಾನಾರ್ಜನೆಗೆ ಸಹಕಾರಿಯಲ್ಲವೇ ?

ಮೇಲ್ಕಂಡ ಗ್ರಂಥಗಳು ಓದುಗರ ಅಭಿರುಚಿಗೂ, ಮುಂದೆ ತಾವು ಯಾವ ಗ್ರಂಥಗಳಿಂದ ಮುಂದಿನ ತಮ್ಮ ಜೀವನದ ಗತಿಯನ್ನು ಹೊಂದಲು ಸಹಾಯಕವೆಂಬುದನ್ನು ಸ್ಥಿರಪಡಿಸಿಕೊಳ್ಳಬಹುದು. ಯಾವ ಬಗೆಯ ಗ್ರಂಥಗಳನ್ನು ಓದಿದರೂ ನಮ್ಮ ಸಂಸ್ಕೃತಿಗೆ ತಕ್ಕಂತೆ ರಾಮಾಯಣ, ಭಾರತ, ಭಾಗವತ, ಗೀತೆ ಇವುಗಳನ್ನೂ ಓದಿ ಇಹಕ್ಕೂ, ಪರಕ್ಕೂ ಸಾಧನೆ ಮಾಡಿಕೊಡರೆ ಓದಿನ ಅರ್ಥಕ್ಕೆ ಮೆರಗು ಬರುತ್ತದೆ.

ಪುಸ್ತಕ ಅಧ್ಯಯನದಿಂಥ ಹೃದಯಶುದ್ಧಿ, ಮನಶುದ್ಧಿ ಉಂಟಾಗುವುದು. ಮಲಿನವಾದ ಮನಸ್ಸು ತಿಳಿಯಾಗುತ್ತದೆ. ಹೃದಯ ವಿಶಾಲತೆ, ವಿವೇಕ ಇವುಗಳು ಮೂಡುತ್ತವೆ, ತಾರತಮ್ಯ ಜ್ಞಾನಹೆಚ್ಚುತ್ತದೆ. ಇದರ ಜೊತೆಗೆ ನೀತಿಗರ್ಭಿತ ಪುಸ್ತಕ-ಗಳನ್ನೂ ಓದಬೇಕು. ನೀತಿವಂತ ಮನುಜರಿಗೆ ಬೆಲೆಯುಂಟು, ಅ ನೀತಿಯಿಂದಲೂ, ದುರ್ನಡತೆಯಿಂದಲೂ ಮನುಷ್ಯರಿಗೆ ಹಾನಿಯಲ್ಲವೇ ? ಎಷ್ಟೇಓದಿದರೂ ಸಾರ-ಮಾರ್ಥಿಕ ಜ್ಞಾನವಿಲ್ಲನಾದರೆ ಆ ಓದಿನ ಬೆಲೆಗೆ ಸಾರ್ಥಕವಿಲ್ಲವೆನಿಸುವುದು ನಾನಾ ಬಗೆಯ ಪುಸ್ತಕ ಓದಿನಿಂದ ಉನ್ನತ ಜ್ಞಾನ ಭಂಡಾರವನ್ನು ವಿಸ್ತರಿಸಿ ಕೊಳ್ಳುವುದೂ ಸಹ [illegible]





## ವಿದ್ಯಾರ್ಥಿ ಜೀವನದ ಬೆಳಕು ಸರಣಿ. ಲೇಖನ-೧

ಲೇಕನ. ಬಿ. ಎಸ್. ಕೃಷ್ಣಮೂರ್ತಿ, ನಂ. 5, ಸೀತಾವಿಲಾಸ ರಸ್ತೆ, ಮೈಸೂರು-570 024.

ವಿದ್ಯೆಅಂದರೇನು? ಹಾಸ್ಯ ಸಾಹಿತಿ, ಕೈಲಾಸವಾಸಿ, ಟಿ. ಪಿ. ಕೈಲಾಸಂ ರವರು ಅವರ ತರ್ಕದಂತೆ ವಿದ್ಯೆ ಅಂದರೇನು ?

ಅವರ ಹೇಳಿಕೆ ಪೂರ್ವಜನ್ಮದ ಗೋತ್ರದಿಂದಲೋ, ರಕ್ತದಿಂದಲೋ, ಇದು ಅಲ್ಲದೆ ಅಮ್ಮಾ, ಅಮ್ಮಾಂತ ಬಾಯಿ ಬಿಟ್ಟಾಗಿನಿಂದ ಸ್ಕೂಲಿಗೆ ಸೇರೋವರೆವಿಗೂ, ನಾನು ಹೇಳಿದಂತೆ ಸುಳ್ಳು ಹೇಳ್ಬಾರ್ದು, ಸುತ್ತ ಮುತ್ತಲೂ ಇರೋರನ್ನ ಹಿಂಸಿಸಬಾರದು ; ಎಲ್ಲರಿಗೂ ಉಪಯೋಗವಾಗಿರಬೇಕು ಅಂತ, ಹೀಗೆಲ್ಲಾ ತಾಯಿ ಆದವಳು ಒಳಗಿಳಿಸಿರೋ ಗುಣಗಳನ್ನು ಸ್ಕೂಲುಗಳೂ, ಕಾಲೇಜುಗಳೂ ಹೊರಕ್ಕೆಳೆದು, ಸ್ಕೂಲಿಗೆ ಬಂದ ಮಕ್ಕಳು ಕಾಲೇಜು ಬಿಟ್ಟು ಹೊರಗೆ ಹೊರಡುವಾಗ ಮನೆಗೂ, ಸಮಾಜಕ್ಕೂ ದೇಶ-ಕ್ಕೂ, ಉಪಯೋಗಿಗಳಾಗಿರೋ ಹಾಗೆ ಮಾಡೋದೇ ವಿದ್ಯೆ !

ಚಿಕ್ಕಂದಿನಲ್ಲಿ ಅನಾದರಣೆಮಾಡಿ, ಕೆಡಿಸಿ, ಸ್ವಾರ್ಥತೆಯ ಮುದ್ದೆಗಳಾದ ಮಕ್ಕಳನ್ನು ಸ್ಕೂಲಿಗೆ ಕಳಿಸಿದ್ರೆ ಆಸ್ಕೂಲು ಎಂಥಾ ವಿಚಿತ, ಪೂರ್ಣ ವಿದ್ಯೆಯನ್ನು ಹೊಂದಿಸಿ ಕೊಂಡರೆ ಒಂದು ಚೊಂಬೂನೂ, ಬಿಂದಿಗೇನೂ ಬೀಳದ ಬಾವೀಲಿ ಪಾತಾಳ ಗರಡೀನ ಹಾಕಿ ಎಳೆದ್ರೂನೂ ಹ್ಯಾಗೆ ಒಂದು ಪಾತ್ರೇನೂ ಹೊರಬೀಳಲ್ವೋಹಾಗೆ ಮನೇಲಿ ಕೆಟ್ಟುಹೋದ ಈ ಮಕ್ಕಳ ಸ್ವಾರ್ಥಪರತೆ ಹೊರ ಬಿದ್ದೀತೇ ಹೊರತು ಇಲ್ಲದ ಗುಣಾನ ಎಲ್ಲಿಂದ ಹೊರಗೆಹಾಕ್ತಾರು ? ಆ ಉಪಾಧ್ಯಾಯರು, ಮತ್ತು ಪ್ರೊಫೆಸರುಗಳು ?

ವಿದ್ಯೆ ಎಂಬುದು ಸಮಾಜ ಜೀವನಕ್ಕೆ ಹೊಂದಿಕೊಂಡು, ಜೀವನ ರಹಸ್ಯವನ್ನು ಹೊಂದುವುದೇ ವಿದ್ಯೆ ! ವಿದ್ಯೆ ಸಾಮಾನ್ಯವಾಗಿ ಕಟ್ಟುನಿಟ್ಟಿನ ಕ್ರಮದಿಂದಲೂ: ಏಕ ನಿಷ್ಠೆಯಿಂದಲೂ, ಶಿಸ್ತಿನಿಂದಲೂ, ಬರಬೇಕು. ಇದು ನಿಜವಾದ ತಪಸ್ಸಾಧನೆಯೇ ಆಗಿದೆ ! ಕಠಿಣ ಕ್ರಮವೂನಿಜ ! !

ಅಪೇಕ್ಷಿತ ಉದ್ದೇಶಕ್ಕಾಗಿ, ಸಮರ್ಪಕವಾದ, ವಿಧಾನದಿಂದ, ಚೈತನ್ಯರೂಪಿಯಾದ, ಮಗುವಿನ ಸ್ವಾಭಾವಿಕ ಒಲವು, ಶಕ್ತಿಗಳನ್ನು ತಿದ್ದಿ, ಸಂಸ್ಕಾರಗೊಳಿಸಿ ರೂಪಿಸುವುದೇ ಕ್ರಮ ಬದ್ಧ ವಿದ್ಯೆ (ಶಿಕ್ಷಣ.)

ಮಕ್ಕಳು ಮಾನವರಾಗಿ, ನಾಗರೀಕರಾಗಿ ಇನ್ನೊಬ್ಬರೊಡನೆ ಮೈತ್ರಿಯಿಂದ ಗೌರವದಿಂದ ವರ್ತಿಸುವಂತೆ ಮಾಡಿ, ಮಕ್ಕಳಲ್ಲಿ ಔದಾರ್ಯ, ಭ್ರಾತೃಭಾವ, ಸಹಾನುಭೂತಿಗಳನ್ನುಂಟುಮಾಡುವುದೇವಿದ್ಯೆ.

ಸಾಕ್ರೇಟಿಸನು ಬೌದ್ಧಿಕ ಬೆಳವಣಿಗೆಗೆ ಪ್ರಾಧಾನ್ಯ ನೀಡಿ, ಜ್ಞಾನಾರ್ಜನೆಗೂ ಮಹತ್ವವನ್ನು ಕೊಟ್ಟ. ಇದೂ ಸಹ ಒಂದು ವಿದ್ಯೆಯೇ !

ವ್ಯಕ್ತಿಯನ್ನು ಸಮಾಜದ ಸಲುವಾಗಿ ಉಪಯುಕ್ತವುಳ್ಳವನ್ನಾಗಿ ಮಾಡುವುದು ವಿದ್ಯೆಯೆಂದು ಬೇಕ಼ (Bacon) ಅನಿಸಿಕೆ.

ಗಾಂಧೀಜಿಯವರು ಮಗುವಿನ ಶಾರೀರಕ, ಮಾನಸಿಕ ಮತ್ತು ಆಧ್ಯಾತ್ಮಿಕ ಶಕ್ತಿಗಳ ವಿಕಾಸವನ್ನುಂಟುಮಾಡುವುದೇವಿದ್ಯೆ ಎಂದು ಸಾರಿರುತ್ತಾರೆ.

1. ವಿದ್ಯೆವುಳ್ಳವನ ಮುಖವು, ಮುದ್ದು ಬರುವಂತಿಕ್ಕು,
   ವಿದ್ಯೆವಿಲ್ಲದವನ ಮುಖವು ಹಾಳೂರ ಹದ್ದಿನಂತಿಕ್ಕು.
2. ಇದ್ದಲ್ಲಿ ಸಲುವ, ಹೋಗಿನ್ದಲ್ಲಿಯೂ ಸಲುವ। ವಿದ್ಯವ ಕಲಿತಬಡವತಾ।
   ಗಿರಿಯ ಮೇಲಿದ್ದರೂ ಸಲುವ।
3. ವಿದ್ಯೆಯೇ ಸಿರಿರೂಪು, ವಿದ್ಯೆಯೇ ಗುರುವು.
4. ಒಡಲೊಳಡಗಿದ ವಿದ್ಯೆ, ಒಡಗೂಡಿ ಬರುತಿರಲು। ಒಡಹುಟ್ಟಿದವರು ಕಳ್ಳರು.
5. ವಿದ್ಯಕ್ಕೆ ಕಡೆಯಿಲ್ಲ, ಬುದ್ಧಿಗೆ ಬೆಲೆಯಿಲ್ಲ.
6. ವಿದ್ಯವೇತಾಯ್ತಂದೆ, ಬುದ್ಧಿಯೇ ಸೋದರನು.

ಈ ಮೇಲಿನ ವಾಕ್ಯಗಳು ಸರ್ವಜ್ಞನು (ಕವಿಯ) ವಿದ್ಯೆಯ ಮಹತ್ವವನ್ನು ವರ್ಣಿಸುತ್ತಾನೆ. ಈ ನುಡಿಗಳು ಉಪನಿಷತ್‌ಗಳಂತೆ ಮೌಲ್ಯವುಳ್ಳವುಗಳಾಗಿವೆ. "ಉಪನಿಷತ್ತು ಮೋಕ್ಷದಾಯಕವಾದುದೇವಿದ್ಯೆಯೆಂದು ಹೇಳುತ್ತದೆ."

ಶ್ರೀ ಶಂಕರಾಚಾರ್ಯರು ಆತ್ಮಪ್ರಕಾಶವನ್ನುಂಟು ಮಾಡುವುದೇವಿದ್ಯೆಯೆಂದು ಹೇಳಿರುವರು. ಸ್ವಾಮಿ ವಿವೇಕಾನಂದರು ವಿದ್ಯಾಭ್ಯಾಸವು ಕೇವಲ ವಿಷಯ . ಸಂಗ್ರಹವಾದರೆ, ಪುಸ್ತಕಾಲಯಗಳೇ ಘನವಿದ್ವಾಂಸರು; ವಿಶ್ವಕೋಶಗಳೇ ಋಷಿಗಳಾಗುವುವು ಎಂದರು.

ಈ ಮೇಲೆ ಉದಹರಿಸಿರುವುದನ್ನು ವಿದ್ಯಾರ್ಥಿಗಳು ಸಮ ಚಿತ್ತದಿಂದ ಆಲೋಚಿಸಿ ವಿದ್ಯೆಯ ಮಹತ್ವವನ್ನು ತಿಳಿದು ನಡೆದರೆ ಅವರು ಜ್ಞಾನವಂತರಂದೆನಿಸಿಕೊಳ್ಳಲು ಅರ್ಹರಾಗುವರು.

ಅಜ್ಞಾನವನ್ನು ಹೊಡೆದೋಡಿಸಿ, ಸುಜ್ಞಾನವನ್ನು ಸ್ಥಿರವಾಗಿರಿಸಿ, ಮನಸ್ಸಿನಲ್ಲಿದ್ದ ಅಂಧಕಾರವನ್ನು ನೀಗುವುದೇ ವಿದ್ಯೆ !

ಓದಿಗೆ ಅರ್ಥವಿದೆ. ಸರ್ವಜ್ಞ ಕವಿ ಹೇಳಿರುವಂತೆ ಓದಿದಾಓದು। ಮೇದ ಕಬ್ಬಿನ ಸಿಪ್ಪೆ। ಓದಿನ ಒಡಲ ನರಿದಿಹರೆ ಸಿಪ್ಪೆ। ಕಬ್ಬಾದಂತೆ ಕಾಣೋ !'

ಆದ್ದರಿಂದ ಬರಿಯ ಓದು ನಿಜವಾದ ವಿದ್ಯೆಯಲ್ಲ, ಓದಿನ ಅರ್ಥಸಂಪೂರ್ಣವಾಗಿ ತಿಳಿದುಕೊಂಬುವುದೇ ಸಾರ್ಥಕವಿದ್ಯೆಯೆನಿಸುವುದು.



## ಸಮೂಹ ಮಾಧ್ಯಮಗಳಿಂದ ಗ್ರಾಮೀಣ ಕ್ರಾಂತಿ ಸಾಧ್ಯವೇ ?

ಡಿ. ವೆಂಕಟರಾವ್, ಎಂ.ಎ., ಅರ್ಥಶಾಸ್ತ್ರ ರೀಡರ್, ಸರ್ಕಾರಿ ಕಲಾ ಕಾಲೇಜ್ ಹಾಸನ.

ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಸಮೂಹ ಮಾಧ್ಯಮಗಳ ಬಹುಮುಖ್ಯ ಉದ್ದೇ ವನ್ನು ಸಾಧಿಸಬಲವು. ಸಾಮಾಜಿಕ ಮತ್ತು ಸಾಂಸ್ಕೃತಿಕ ಕ್ಷೇತ್ರದ ಮಟ್ಟಗಳು ಮತ್ತು ಬದಲಾಗುತ್ತಿರುವ ವಾತಾವರಣವನ್ನು ಇವು ಪ್ರತಿ ಫಲಿಸ ಬಲ್ಲವು, ಸಮೂಹ ಮಾಧ್ಯಮಗಳು ಗ್ರಾಮೀಣ ಅಭಿವೃದ್ಧಿಗೆ ಪೂರಕವಾಗಿ ದುಡಿಯಬಲ್ಲವು. ಆದರ ನೋವಿನ ಸಂಗತಿ ಎಂದರೆ ಇದುವರೆವಿಗೆ ಗಾಮೀಣ ಪ್ರದೇಶದ ಜನರಲ್ಲಿ ಪರಿಣಾಮಕಾರಿಯಾಗಿ ಬೇರೂರದಿರುವುದು.

ಭಾರತದ 80 ಕೋಟಿ ಜನಸಂಖ್ಯೆಯಲ್ಲಿ ಸುಮಾರು ಶೇ, 68 ರಷ್ಟು ಜನ ಹಳ್ಳಿಗಾಡುಗಳಲ್ಲಿ ಕೃಷಿಯನ್ನು ಮುಖ್ಯ ಕಸುಬನ್ನಾಗಿ ಹೊಂದಿದ್ದಾರೆ, ಇವರು ಬಡತನ, ನಿರುದ್ಯೋಗ, ವಿಸ್ತಾರವಾದ ಪ್ರಾದೇಶಿಕ ಆರ್ಥಿಕ ಅಸಮತೋಲನ ಮತ್ತು ಪ್ರಾಚೀನ ಸಾಮಾಜಿಕ ಅರ್ಥಹೀನ ಸಂಪ್ರದಾಯಗಳ ಬೃಹತ್ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಈ ಘೋರತರವಾದ ಸಮಸ್ಯೆಗಳೊದಿಗೆ ಹೋರಾಡುವಲ್ಲಿ ಸಮೂಹ ಮಾಧ್ಯಮಗಳು ಇಂದು ಎಷ್ಟರ ಮಟ್ಟಿನ ಪಾತ್ರವಹಿಸುತ್ತಿವೆ ಎಂದು ಪ್ರಶ್ನಿಸಿ ಕೊಂಡಾಗ ನಮಗೆ ದೊರೆಯುವುದು ತೀರಾ ನಿರಾಶಾದಾಯಕ ಉತ್ತರ, ರಾಷ್ಟ್ರದ, ಇಡೀ ವಿಶ್ವದ ಎಲ್ಲರೀತಿಯ ಸುದ್ದಿಗಳು ಅತಿವೇಗವಾಗಿ ಎಲ್ಲಡೆ ಜನರಿಗೆ ತಿಳಿಯುವುದು ರೇಡಿಯೋ ಮತ್ತು ವೃತ್ತ ಪತ್ರಿಕೆಗಳ ಮೂಲಕ. ವೃತ್ತಿ ಪತ್ರಿಕೆಗಳಿಗೆ ಹೋಲಿಸಿದರೆ, ರೇಡಿಯೋ ಸುದ್ದಿ ಅತಿ ಕ್ಷಿಪ್ರವಾಗಿ ಪ್ರಸಾರವಾಗುತ್ತದೆ. ವಿಶ್ವದ ಸಮಸ್ತ ಆಗು ಹೋಗುಗಳನ್ನು ದಿನ ಪತ್ರಿಕೆಗಳು ಹೆಚ್ಚು ವಿವರವಾಗಿ ತಿಳಿಸುತ್ತವೆ. ಹೀಗೆ ಈ ಎರಡೂ ಸಾಧನಗಳು ನಮ್ಮ ದೇಶದ ಸಮರ್ಥ ಸಮೂಹ ಮಾಧ್ಯಮಗಳೆನಿಸಿವೆ. ಆದರೆ ನಗರಗಳೊಂದಿಗೆ ಹೋಲಿಸಿದಾಗ ಗ್ರಾಮೀಣ ಪ್ರದೇಶಗಳಲ್ಲಿ ವೃತ್ತ ಪತ್ರಿಕೆಗಳನ್ನು ನಿಯಮಿತವಾಗಿ ಓದುವ ರೂಢಿಯಾಗಲಿ, ಹವ್ಯಾಸವಾಗಲಿ ಇಲ್ಲ. ಇಂದಿಗೂ ವೃತ್ತ ಪತ್ರಿಕೆಗಳ ಗ್ರಾಮೀಣ ಪ್ರದೇಶಗಳ ಜನಸಮೂಹಕ್ಕೆ ಆವಶ್ಯಕವೆನಿಸಿಲ್ಲ. ವೃತ್ತ ಪತ್ರಿಕೆಗಳು ಅವರನ್ನು ರಂಜಿಸಿಲ್ಲ. ವೃತ್ತ ಪತ್ರಿಕೆಗಳನ್ನು ಅಭಿವೃದ್ಧಿ ಸಾಧನಗಳೆಂದು ಪರಿಗಣಿಸುವ ಹಳ್ಳಿಗರ ಸಂಖ್ಯೆ ತೀರಾಕಡಿಮೆ. ಪತ್ರಿಕಾ ವಾಚಕ ಹಳ್ಳಿಗರ ಉದ್ದೇಶ ಸುದ್ದಿಯನ್ನು ತಿಳಿದು ಕೊಳ್ಳಬೇಕು ಎನ್ನುವಷ್ಟೆ ಆಗಿರುತ್ತದೆ. ಏಕೆಂದರೆ ನಮ್ಮ ಗ್ರಾಮೀಣ ಸಾಮಾಜಿಕ ಸ್ವರೂಪವೇ ಹಾಗಿದೆ, ಹೀಗಾಗಿ ಸಂವಹನ ಮಾಧ್ಯಮಗಳಿಗೆ ಗ್ರಾಮೀಣ ಪ್ರದೇಶಗಳಿದ ಬರುವ ಹಣ ಕನಿಷ್ಠ ಗ್ರಾಮೀಣ ನೆಲೆಯಲ್ಲಿ ಪ್ರಸಾರವಾಗುವ ಕೆಲವೇ ರೇಡಿಯೋ ಕಾರ್ಯಕ್ರಮಗಳೂ ಸಹ ಗ್ರಾಮೀಣ ಜನರ ಅಂತರಾಳವನ್ನು ಪ್ರವೇಶಿಸದೆ ಕನಿಷ್ಠ ಮಿತಿಯಲ್ಲೇ

ಉಳಿದಿವೆ. ಬಹುತೇಕ ಗ್ರಾಮಗಳ ಜನರಿಗೆ ದೂರದರ್ಶನದ ಬಗ್ಗೆ ತಿಳಿದೇ ಇಲ್ಲ. ಗ್ರಾಮೀಣ ಜನರ ಮುಖ್ಯ ವೃತ್ತಿಯಾದ ವ್ಯವಸಾಯದ ಸುದ್ದಿಗಳಿಗೆ ಕೂಡ ಕೇವಲ ನೂರಕ್ಕೆ 50 ರಷ್ಟು ಗ್ರಾಮೀಣರು ಪಾಶಸ್ತ್ಯ ಕೊಡುತ್ತಾರೆ. ಅಂದರೆ ವ್ಯವಸಾಯಕ್ಕೆ ಸಂಬಂಧಿಸಿದ ಸುದ್ದಿಗಳು ಹೆಚ್ಚಿನ ಸಂಖ್ಯೆಯ ಗ್ರಾಮೀಣ ಜನರ ಮೇಲೆ ಪರಿಣಾಮ ಬೀರಿಲ್ಲ ಎಂದಾಯಿತು. ಪ್ರಸ್ತುತ ವೃತ್ತ ಪತ್ರಿಕೆಗಳು ಕೃಷಿಗೆ ಸಂಬಂಧಿಸಿದ ಸುದ್ದಿ ಸಮಾಚಾರಗಳನ್ನು ತುಂಬ ಕಡಿಮೆ ಪ್ರಮಾಣದಲ್ಲಿ ಒದಗಿಸುತ್ತಿವೆ. ಈ ದಿಸೆಯಲ್ಲಿ ಕರ್ನಾಟಕದ ಕನ್ನಡ ಪ್ರಭ, ಪ್ರಜಾವಾಣಿ ದಿನ ಪತ್ರಿಕೆಗಳು ಗ್ರಾಮೀಣ ಸಮಸ್ಯೆಗಳನ್ನು ಕೃಷಿ ಅಭಿವೃದಿಯನ್ನು ಕುರಿತು ಲೇಖನಗಳನ್ನು ಪ್ರಕಟಿಸುತ್ತಿರುವುದು ನಿಜಕ್ಕೂ ಸ್ತುತ್ಯಾರ್ಹ. ಹೀಗೆ ವೃತ್ತ ಪತ್ರಿಕೆಗಳು ಗ್ರಾಮೀಣ ಜನರ ಬದುಕಿನೊಂದಿಗೆ ನೇರವಾಗಿ ಪ್ರತಿಕ್ರಯಿಸುತ್ತಾ ಜನ ಸಮಸ್ಯೆಗಳನ್ನು ಅರ್ಥಮಾಡಿಕೊಂಡು ಅವುಗಳ ಪರಿಹಾರಕ್ಕೆ ಯತ್ನಿಸುವುದು ಭಾರತದ ಇಂದಿನ ಪರಿಸ್ಥಿತಿಯಲ್ಲಿ ತುಂಬಾ ಮುಖ್ಯ. ರೇಡಿಯೋ ಅಥವಾ ವೃತ್ತ ಪತ್ರಿಕೆ ಯಾವುದೇ ಆಗಲಿ ಅದು ನೇರವಾಗಿ ಗ್ರಾಮೀಣ ಜನರ ಬದುಕಿನೊಂದಿಗೆ ಸಕ್ರಿಯವಾಗಿ ಭಾಗವಹಿಸಬೇಕು. ಆಗ ಮಾತ್ರ ಅದು ತನ್ನ ಕರ್ತವ್ಯ ಮತ್ತು ಸಾಮರ್ಥ್ಯವನ್ನು ಪೂರ್ತಿಯಾಗಿ ನಿರ್ವಹಿಸಿದಂತಾಗುತ್ತದೆ. ಹಾಗಿಲ್ಲದಿದ್ದಲ್ಲಿ ಅದು ತನ್ನ ಕರ್ತವ್ಯದಲ್ಲಿ ಅರ್ಧದಷ್ಟನ್ನು ಮಾತ್ರ ನಿರ್ವಹಿಸಿದಂತಾಗುತ್ತದೆ. ಇಂದಿನ ಪರಿಸ್ಥಿತಿಯಲ್ಲಿ ತುಂಬಾ ಮುಖ್ಯ. ರೇಡಿಯೋ ಅಥವಾ ವೃತ್ತ ಪತ್ರಿಕೆಯಾವುದೇ ಆಗಲಿ ಅದುನೇರವಾಗಿ ಗ್ರಾಮೀಣ ಜನರ ಬದುಕಿನೊಂದಿಗೆ ಸಕ್ರಿಯವಾಗಿ ಭಾಗವಹಿಸಬೇಕು. ಆಗ ಮಾತ್ರ ಅದು ತನ್ನ ಕರ್ತವ್ಯ ಮತ್ತು ಸಾಮರ್ಥ್ಯವನ್ನು ಪೂರ್ತಿಯಾಗಿ ನಿರ್ವಹಿಸಿದಂತಾಗುತ್ತದೆ. ಹಾಗಿಲ್ಲದಿದ್ದಲ್ಲಿ ಅದು ತನ್ನ ಕರ್ತವ್ಯದಲ್ಲಿ ಅರ್ಧದಷ್ಟನ್ನು ಮಾತ್ರ ನಿರ್ವಹಿಸಿದಂತಾಗುತ್ತದೆ.

**ಆರ್ಥಿಕ ಸಮಸ್ಯೆ:**

ಗ್ರಾಮೀಣ ಜನಸಮುದಾಯದ ಮೇಲೆ ವೃತ್ತ ಪತ್ರಿಕೆಗಳು ಹೆಚ್ಚಿನ ಪ್ರಭಾವ ಬೀರುವುದಕ್ಕೆ ಮುಖ್ಯಕಾರಣ ಆರ್ಥಿಕ ಸಮಸ್ಯೆ. ಅನೇಕ ಗ್ರಾಮೀಣ ಜನರಿಗೆ ನಿಯಮಿತವಾಗಿ ದಿನ ಪತ್ರಿಕೆಗಳನ್ನು ಓದ ಬೇಕೆಂಬಹಂಬಲ ವಿದ್ದಾಗ್ಯೂ ಕಡಿಮೆ ಆದಾಯದಿಂದಾಗಿ ಅವರು ಪತ್ರಿಕೆಗಳನ್ನು ಕೊಳ್ಳಲು ಅಸಮರ್ಥರಾಗಿದ್ದಾರೆ. ಹೀಗಾಗಿ ಹಳ್ಳಿಯ ಬಹಳಷ್ಟು ಜನ ಪತ್ರಿಕೆ ತರಿಸಿ ಓದುವವರನ್ನು ಕೇಳಿ ಸುತ್ತ ಮುತ್ತಲಿನ ಸುದ್ದಿಗಳ ಬಗ್ಗೆ ತಿಳಿದುಕೊಳ್ಳಬೇಕಾಗಿದೆ. ಇಂದಿನ ಹಳ್ಳಿಗರು ಬಿಡುವು ದೊರತು ಪತ್ರಿಕೆಯು ಸಿಕ್ಕರೆ ಆಸಕ್ತಿಯಿಂದ ಓದಬಲ್ಲರು ಇಲ್ಲವೇ ಓದಿಸಿ ಕೇಳಬಲ್ಲರು. ಆದ್ದರಿಂದ ಕೃಷಿಯೋಜನಾ ಕಾರ್ಯಕ್ರಮಗಳು ಗ್ರಾಮೀಣ ಜನರ ಆರ್ಥಿಕ ಸಂಪನ್ಮೂಲಗಳು ಹೆಚ್ಚುವಂತೆ ರೂಪುಗೊಳ್ಳಬೇಕು. ಗ್ರಾಮೀಣ ಪ್ರದೇಶಗಳ ಕಸಬುಗಳು ಕೂಡ



ವ್ಯವಸಾಯದ ಅಭಿವೃದ್ಧಿಯ ಮೇಲೆ ನೇರವಾಗಿ ಆಶ್ರಿತವಾಗಿರುವುದರಿಂದ ಇದು ಅನಿವಾರ್ಯವೂ ಹೌದು. ಇವರ ಜೊತೆಗೆ ನಮ್ಮ ಸರಕಾರ ಪ್ರತಿಹಳ್ಳಿಯಲ್ಲೂ ಒಂದು ಉಚಿತವಾಚನಾಲಯವನ್ನು ತೆರೆದು ಅಲ್ಲಿಗೆ ದಿನಪತ್ರಿಕೆಗಳು, ವಾರಪತ್ರಿಕೆಗಳು, ಮಾಸಪತ್ರಿಕೆಗಳು ಮತ್ತಿತರ ನಿಯತಕಾಲಿಕ ಪ್ರಕಟಣೆಗಳನ್ನು ಪೂರೈಸುವಂತಹ ಕಾರ್ಯವನ್ನು ಕೈಗೊಳ್ಳಬೇಕು. ಆಗ ಗ್ರಾಮೀಣ ಜನ ದಿನ ಪತ್ರಿಕೆಗಳ ಅವಶ್ಯಕತೆಯನ್ನು ಕಂಡುಕೊಳ್ಳುವಂತಾಗುತ್ತದೆ. ರಾಷ್ಟ್ರಮಟ್ಟದಲ್ಲಿ ನಡೆಯುವ ಘಟನಾವಳಿಗಳ ಅರಿವು ದೊರೆಯುವುದರಿಂದ ಇದು ನಿಜಕ್ಕೂ ಗ್ರಾಮೀಣ ಜನರಲ್ಲಿ ಸಾಮಾಜಿಕ ಕಳಕಳಿಯನ್ನು ಹುಟ್ಟಿಸಬಲ್ಲದು.

**ಗ್ರಾಮೀಣ ವೃತ್ತ ಪತ್ರಿಕೆಗಳು.**

ನಮ್ಮಲ್ಲಿ ವೃತ್ತ ಪತ್ರಿಕೆಗಳ ಪ್ರಸರಣ ಹೆಚ್ಚಿನ ಗ್ರಾಮಗಳ ಜನರಿಗೆ ಇವು ಅಲಭ್ಯ. ಇದಕ್ಕೆ ಮುಖ್ಯ ಕಾರಣ ಗಾಮೀಣ ಪ್ರದೇಶಗಳಿಗೆ ವೃತ್ತ ಪತ್ರಿಕೆಗಳ ಸಾಗಣೆ ಕಾರ್ಯದಲ್ಲಿ ಅನೇಕ ಸಮಸ್ಯೆಗಳಿರುವುದು, ಹಲವು ಗ್ರಾಮಗಳಿಗೆ ಇಂದಿಗೂ ಸಹ ಮಣ್ಣಿನ ರಸ್ತೆಯ ಸೌಲಭ್ಯವೂ ಇಲ್ಲ. ನಮ್ಮ ದೇಶದಲ್ಲಿ ಶೇ 30 ರಷ್ಟು ಗ್ರಾಮಗಳಿಗೆ ಸಮೀಪದ ರಸ್ತೆ ತಲುಪಲು ಕಾಲುದಾರಿಯ ಸೌಲಭ್ಯವೂ ಇಲ್ಲ. ಕರ್ನಾಟಕದಲ್ಲೇ ಇಂದು ಇಂತಹ 1400 ಗ್ರಾಮಗಳಿವೆಯೆಂದು ತಿಳಿದು ಬಂದಿದೆ. ಆದಕ್ಕಾಗಿ ಸಾರಿಗೆ ಸೌಕರ್ಯವನ್ನು ಸ್ವಲ್ಪಮಟ್ಟಿಗಾದರು ಸುಧಾರಿಸುವುದರ ಜೊತೆಗೆ ಸರಕಾರದ ಗರಿಷ್ಠ ಆರ್ಥಿಕ ನೆರವನ್ನು ಪಡೆದು ಗ್ರಾಮೀಣ ವೃತ್ತ ಪತ್ರಿಕೆಗಳು ಪ್ರಾರಂಭವಾಗಬೇಕು. ಚಂದಾದಾರರು ಮತ್ತು ಜಾಹೀರಾತುದಾರರನ್ನು ಗ್ರಾಮೀಣ ವೃತ್ತ ಪತ್ರಿಕೆಗಳೂ ಆಶ್ರಯಿಸುವಂತಾಗಬೇಕು. ಈ ಪತ್ರಿಕೆಗಳಲ್ಲಿ ರೈತರಿಗೆ ಅಡುವ ಭಾಷೆಯಲ್ಲಿ ಕೃಷಿ ಕ್ಷೇತ್ರದಲ್ಲಾಗುತ್ತಿರುವ ಸುಧಾರಣೆಗಳ ಬಗ್ಗೆ ಮನವರಿಕೆ ಮಾಡಿಕೊಡಬೇಕು. ಹೆಚ್ಚು ಬೆಳೆಪಡೆಯಲು ಸರಕಾರ ನೀಡುತ್ತಿರುವ ನೆರವನ್ನು ಉಪಯೋಗಿಸಿಕೊಳ್ಳುವಂತೆ ಅವರಿಗೆ ಸೂಕ್ತ ಮಾರ್ಗದರ್ಶನ ನೀಡಬೇಕ . ದಲ್ಲಾಳಿಗಳ ಹಿಡಿತಕ್ಕೆ ಸಿಗದಂತೆ ಸರಕಾರ ನೀಡಿರುವ ಸಹಕಾರ ಸೌಲಭ್ಯಗಳನ್ನು ಉಪಯೋಗಿಸಿಕೊಳ್ಳುವಂತೆ ಅವರಿಗೆ ಸುಲಭರೀತಿಯಲ್ಲಿ ತಿಳಿಸಬೇಕು. ಆರೋಗ್ಯ ಮತ್ತು ನೈರ್ಮಲ್ಯದ ಬಗೆಗೆ ಸೂಕ್ತ ತಿಳುವಳಿಕೆ ನೀಡಬೇಕು. ಮೂಢ ನಂಬಿಕೆಗಳ ಅಪಾಯದ ಬಗ್ಗೆ ಸರಳ ರೀತಿಯಲ್ಲಿ ತಿಳಿಸಿ ಹಳ್ಳಿಗರ ಮೌಢ್ಯವನ್ನು ನಿವಾರಿಸಲು ಪ್ರಯತ್ನಿಸಬೇಕು.

ಅನೇಕ ರಾಷ್ಟ್ರಗಳಲ್ಲಿ ಗ್ರಾಮೀಣ ವೃತ್ತ ಪತ್ರಿಕೆಗಳ ವಿಸ್ತರಣೆ ಮತ್ತು ಅಭಿವೃದ್ಧಿಗಳು ಪ್ರಗತಿಯ ಹಂತದಲ್ಲಿವೆ. ಇದಕ್ಕೆ ನಿದರ್ಶನವಾಗಿ ಕೀನ್ಯಾದೇಶದಲ್ಲಿ ಕಾರ್ಯಾರಂಭ ಮಾಡಿರುವ ಪ್ರಗತಿಪರಯೋಜನೆಗಳನ್ನು ಹೆಸರಿಸಬಹುದು ಅಂತರರಾಷ್ಟ್ರೀಯ ವೃತ್ತಪತ್ರಿಕಾ ಪ್ರಕಾಶಕರ ಫೆಡರೇಷನ್, ಯುನೆಸ್ಕೋಗೆ ಗ್ರಾಮೀಣ ವೃತ್ತಪತ್ರಿಕೆ

ಗಳನ್ನು ಪ್ರೋತ್ಸಾಹಿಸುವ ಸಂಚಾರ ಕಿರುಮುದ್ರಣ ಘಟಕವೊಂದನ್ನು ನೀಡಿದೆ. ಇದು ಅಮೂಲ್ಯವಾದ ಸಾರ್ಥಕ ಕೊಡುಗೆ. ಸಂಚಾರಿ ಮುದ್ರಣವಾಹನ ವೃತ್ತ ಪತ್ರಿಕೆಯ ಪ್ರಕಟಣೆಗೆ ಬೇಕಾದ ಎಲ್ಲಾ ಕನಿಷ್ಠ ಸೌಲಭ್ಯಗಳನ್ನು ಹೊಂದಿದೆ. ಈ ಅಪೂರ್ವ ಯೋಜನೆಯನ್ನು ಜಾರಿಗೊಳಿಸಲು ಜರ್ಮನಿ ಸರಕಾರ ನಿಧಿಯನ್ನೊದಗಿಸಿದೆ.

ಈ ಸಂಚಾರಿ ಘಟಕವು ಹಳ್ಳಿ ಹಳ್ಳಿಗೂ ಹೋಗುತ್ತದೆ. ಹಳ್ಳಿಗರೊಂದಿಗೆ ಪತ್ರ ಕರ್ತರು ಸಮಾಲೋಚಿಸುತ್ತಾರೆ. ಬೇಕೆನಿಸಿದ ಚಿತ್ರಗಳನ್ನು ತೆಗೆದುಕೊಳ್ಳುತ್ತಾರೆ. ಪತ್ರಿಕೆಯನ್ನು ಮುದ್ರಿಸಿ ಕೇವಲ ಗಂಟೆಗಳಲ್ಲಿ ಹಳ್ಳಿಗರಿಗೆ ದೊರೆಯುವಂತೆ ಮಾಡುತ್ತಾರೆ. ವಿಶೇಷವೆಂದರೆ ಈ ಪತ್ರಿಕೆಯು ಮಹಾನಗರಗಳ ವೈಭವೋಪೇತ ಪತ್ರಿಕೆಗಳಂತೆಯೇ ಒಂದು ಸಂಪೂರ್ಣ ವೃತ್ತ ಪತ್ರಿಕೆಯಾಗಿರುವುದು. ಇದಲ್ಲದೆ ಕೀನ್ಯಾದಲ್ಲಿ ಯುನಸ್ಕೋನೊಂದಿಗೆ ಎರಡು ಗ್ರಾಮೀಣ ಪತ್ರಿಕೆಗಳು ಪ್ರಕಟವಾಗುತ್ತಿವೆ, ಸಾವಿರ ಗಟ್ಟಲೆ ಪ್ರತಿಗಳಲ್ಲಿ ಪ್ರಕಟವಾಗುವ ಈ ಪತ್ರಿಕೆಗಳು ಆಯಾ ಪ್ರಾದೇಶಿಕ ಭಾಷೆಗಳಲ್ಲಿರುತ್ತವೆ, ರಷ್ಯಾದಲ್ಲಿ ದೂರದರ್ಶನ ಮತ್ತು ರೇಡಿಯೋಗಳನ್ನು ವಿದ್ಯಾಭ್ಯಾಸ ಮತ್ತು ಮಾಹಿತಿ ನೀಡಿಕೆಗೆ ವ್ಯಾಪಕವಾಗಿ ಬಳಸಿಕೊಂಡಿರುವುದೇ ಅಲ್ಲಿನ ಅತಿಶಯ ಅಭಿವೃದ್ಧಿಗೆ ಕಾರಣಎನ್ನಬಹುದು.

ಸಮೂಹ ಮಾಧ್ಯಮಗಳಾದ ವೃತ್ತಪತ್ರಿಕೆ, ದೂರದರ್ಶನ, ಚಲನಚಿತ್ರಗಳಿಗಿಂತ ರೇಡಿಯೋ ಇಂದು ಅಗ್ಗವೆನಿಸಿದೆ. ಅಷ್ಟೇ ಅಲ್ಲ, ಅದುಕ್ಷಿಪ್ರ ಮತ್ತು ಪರಿಣಾಮಕಾರಿ ಸಾಧನವೂ ಹೌದು. ಗ್ರಾಮೀಣ ಜನರ ನಂಬಿಕೆಯಲ್ಲಿ ಆಳವಾಗಿ ಬೇರೂರಿರುವ ಮೂಢ ಸಂಪ್ರದಾಯಗಳ ವಿರುದ್ಧ ಪ್ರಚಾರನೀಡುವಲ್ಲಿ, ನೈರ್ಮಲ್ಯ, ಆರೋಗ್ಯ-ಮುಂತಾದ ತಾತ್ವಿಕ ಸೂತ್ರಗಳನ್ನು ಪಾಲಿಸುವಂತೆ ಮಾಡುವಲ್ಲಿ ರೇಡಿಯೋಗಳು ಮಹತ್ವದ ಪಾತ್ರವಹಿಸಬಲ್ಲವು. ಈ ದಿಸೆಯಲ್ಲಿ ರೇಡಿಯೋಗೆ ಇರುವ ಮಹತ್ವದ ಉಪಯೋಗವನ್ನು ನಾವು ಮಾಡಿಕೊಳ್ಳ ಬೇಕಾಗಿದೆ,

ಆಕಾಶವಾಣಿ ಮತ್ತು ದೂರದರ್ಶನಗಳು ಕೇಂದ್ರ ಸರಕಾರದ ಅಧೀನದಿಂದ ಹೊರಬಂದ ಸ್ವಾಯತ್ತ ಸಂಸ್ಥೆಗಳಾದಾಗ ಮಾತ್ರ ನೈಜ ಪ್ರಗತಿಪರ ಅಭಿವೃದ್ಧಿ ಸಾಧ್ಯ. ಆಗ ಯಾವುದೇ ಪಕ್ಷ ಆಡಳಿತಕ್ಕೆ ಬರಲಿ, ಈ ಸಂಸ್ಥೆಗಳು ಕೇವಲ ಸರಕಾರದ-ತುತ್ತೂರಿಗಳಾಗಲು ಅವಕಾಶ ಇರುವುದಿಲ್ಲ. ಸಮೂಹ ಮಾಧ್ಯಮಗಳಿಂದ ಗ್ರಾಮೀಣ ಅಭಿವೃದ್ಧಿ ಸಾಧ್ಯ ಎಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ ಸಮೂಹ ಮಾಧ್ಯಮಗಳನ್ನು ಫಲಪ್ರದವಾಗಿ ಬಳಸಿಕೊಂಡರೆ, ಸಾಧ್ಯವಾದ ಎಲ್ಲ ಸೂಕ್ತ ಕಾರ್ಯಕ್ರಮಗಳನ್ನು ಹಾಕಿಕೊಂಡು ಗ್ರಾಮೀಣ ಪ್ರದೇಶಗಳಲ್ಲಿ ಅವನ್ನು ಉತ್ತೇಜಿಸಿದರೆ, ನಿರುದ್ಯೋಗ, ಬಡತನ, ಅಜ್ಞಾನ, ಅಸಮಾನತೆ ಮುಂತಾದ ಘೋರಸಮಸ್ಯೆಗಳು ಪರಿಹಾರವಾಗಿ ಭಾರತ ಬದಲಾಗಲು ಸಾಧ್ಯ. ●



## ಕನಸಿನ ಕನ್ಯೆ ವೈಜ್ಞಾನಿಕ ಕಿರು ಧಾರಾವಾಹಿ-6

ಪ. ರಾಮಕೃಷ್ಣಶಾಸ್ತ್ರಿ, "ಶಿವಶಕ್ತಿ ನಿಲಯ", ಮಚ್ಚಿನ, ದಕ್ಷಿಣ ಕನ್ನಡ ಜಿಲ್ಲೆ.

ರಾಜವೀರವರ್ಮ ಯಾವುದೊ ಜಾಡ್ಯದಿಂದ ಹಾಸಿಗೆ ಹಿಡಿದ. ದಿನೇ ದಿನೇ ಅವನ ರೋಗ ಪ್ರಬಲಿಸತೊಡಗಿತು. ಹಕೀಮರು ಬಂದು ತರತರದ ಔಷಧಿಗಳನ್ನಿತ್ತು. ರಾಜನ ರೋಗನಿರ್ಮೂಲನಕ್ಕಾಗಿ ಶ್ರಮಿಸತೊಡಗಿರು. ಮಹಾಮಂತ್ರಿಯ ಮೊಗ ಚಿಂತೆಯಿಂದ ಕಳಾಹೀನವಾಗಿತ್ತು. ದಂಡನಾಯಕ ಇಳಿದೇಹೋದ. ಪ್ರಜೆಗಳೆಲ್ಲ ಹಾಹಾಕಾರ ಮಾಡತೊಡಗಿದರು. ದೇವಾಲಯಗಳಲ್ಲಿ ವಿಶೇಷ ಪೂಜೆಗಳು ನಡೆಯತೊಡಗಿದವು. ಕಾಲಕಾಲದ ದೇವಾಲಯಗಳ ಗಂಟೆಗಳು ಒಂದೇ ಸಮನೆ ಟಿಂಟಿಣಿ ನಾದಗೈಯತೊಡಗಿದವು. ಮಂತ್ರ ಘೋಷ ದಿಗ್ದಿಗಂತ ವ್ಯಾಪಿಸತೊಡಗಿತು. ರಾಜ್ಯದ ಮೂಲೆ ಮೂಲೆಯಲ್ಲೂ ಒಂದೇ ಧ್ವನಿ. "ಪ್ರಭುಗಳು ಹಾಸಿಗೆ ಹಿಡಿದಿದ್ದಾರೆ" ಗಾಳಿ ಗಾಳಿಯೂ ಎಲರಿನೊಡನೆ ಸಂಭಾಷಿಸುತ್ತದೆ. "ಪ್ರಭುಗಳು ವ್ಯಾಧಿಗ್ರಸ್ತರಾಗಿದ್ದಾರೆ" ಪಕ್ಷಿ ಪಕ್ಷಿಯೂ ತನ್ನ ಇನಿದನಿಯಿಂದ ಉಲಿಯುತ್ತವೆ, "ನಮ್ಮ ನೆಚ್ಚಿನ ದೊರೆಗಳು ಖಾಯಿಲೆ ಬಿದ್ದಿದಾರೆ"

ಎಲ್ಲೆಲ್ಲೂ ಅದೇ ಸುದ್ದಿ. ಎಲ್ಲರೂ ಪ್ರಭುವಿನ ಆರೋಗ್ಯಕ್ಕಾಗಿ ತಮ್ಮಿಂದಾದ ದೇವರಸೇವೆ ಮಾಡುವವರೇ. ದೇವರಲ್ಲಿ ದೀನರಾಗಿ ಮೊರೆಯಿಡುವವರೇ. "ದಯಾ-ಮಯಾ, ನಮ್ಮ ಪ್ರಭುವನ್ನು ರಕ್ಷಿಸು. ರಕ್ಷಿಸೊ-ರಕ್ಷಿಸು" ಈ ದೀನವಾಕ್ಯ ಎಲ್ಲೆಲ್ಲೂ ಮೊಳಗುತ್ತಿತು. ಅರಮನೆಯಲ್ಲಿ ಸಂತಸದ ಸುಳಿವಿಲ್ಲ. ನಿತ್ಯದಲ್ಲೂ ಬರುತ್ತಿರುವ ವೀಣಾ ವಾದ್ಯದ ರವವಿಲ್ಲ. ಗೆಜ್ಜೆಯ ಮಂಜುಳ ನಾದವಿಲ್ಲ; ಪುಷ್ಪವಾಟಿಕೆಯಲ್ಲಿ ಹೂವರಳಿದರೂ ಎಂದಿನ ಸುಂಗಧ ಬಂಧುರವಿಲ್ಲ. ಎಲ್ಲವೂ ಮಹಾನಿಟ್ಟುಸಿರನ್ನು ಕರೆಯುತ್ತ ಮೌನವಾಗಿ ದಯಾಮಯನನ್ನೆ ಪ್ರಾರ್ಥಿಸುತ್ತಿದ್ದವೂ ಎಂದೆನಿಸುತ್ತಿತ್ತು. ಕೃಶನಾಗಿದ್ದ ರಾಜ; ಧ್ವನಿಯೇ ಗುರುತಿಸದಂತಾಗಿತ್ತು.

ರಾಜನನ್ನು ರೋಗ ಪಟ್ಟಾಗಿ ಹಿಡಿದಿತ್ತು. ಹಕೀಮರಿಗೆ ಬಾಗುವುದಿಲ್ಲ ಎಂದಿತು; ಮಾಂತ್ರಿಕರಿಗೆ ಮಣಿಯಲಾರೆ ಎಂದಿತು; ಜೋತಿಷಿಗಳಿಗೆ ತನ್ನ ಹೊಲಬನ್ನೆ ತಿಳಿಸುವುದಿಲ್ಲ ಎಂದಿತು. ಪರಿಣತರಾರಿಗೂ ಜಗ್ಗೆನೆಂದಿತು; ಎಲ್ಲರೂ ಕೈಕಾಲು ಬಿಟ್ಟು ದೀನರಾಗಿ ನೋಡನೋಡುತ್ತಿರುವಂತೆಯೇ ಕಾಲಚಕ್ರ ಭರದಿಂದ ಉರುಳತೊಡಗಿತು. ದಿನಗಳು ಪಕ್ಷಗಳಾಗಿ ಪಕ್ಷಗಳೂ ತಿಂಗಳಾಗಿ ತಿಂಗಳು ವರ್ಷವನ್ನೂ ಹಿಂದೆ ನೂಕಿ ಮುನುಗ್ಗಿತು.

ಪ್ರಜೆಗಳ ದುಃಖ ಕಂಡು ರಾಜನೂ ಶಯನಾಗಾರದಲ್ಲೆ ಮರುಗಿದ ಕಣ್ಣೀರ್ಗರೆದ ಯಾರೂ ದುಃಖಿಸಬೇಡಿರೆಂದು ಸಂದೇಶ ಕಳುಹಿಸಿದ. "ರಾಜ್ಯದ ರಾಣಿಯಾದ

ಉಮೆಯನ್ನು ತನ್ನ ಅಂತರ ಮಹಾರಾಜ್ಞಿಯನ್ನಾಗಿ ಮಾಡಿಕೊಳ್ಳಿರಿ. ಆಕೆ ದಕ್ಷೆ" ಎಂದು ಹೇಳಿದ. ಎಲ್ಲರೂ ದುಃಖದ ಪೆರ್ಬೆಟ್ಟವನ್ನೇ ಹೊತ್ತು ಮುಂದೇನು ಎಂದು ಕೈ ಚಾಚಿ ಕುಳಿತಿರುವಾಗ ಮಹಾರಾಜ ವೀರವರ್ಮ ತನ್ನ ಭೌತಿಕ ದೇಹವನ್ನು ತೊರೆದು ಶೂನ್ಯದಲ್ಲಿ ಲೀನವಾದ.

ದುಃಖದ ಕಡಲೇ ರಾಜ್ಯದಲ್ಲಿ ತನ್ನ ಭೀಮಾಕಾರದ ತೆರೆಯನ್ನು ಹೊಡೆಯುತ್ತ ಪ್ರವಹಿಸಿತು. ಎಲ್ಲರೂ ತಮ್ಮ ರಾಜನ ಗುಣಗಾನವನ್ನು ಮಾಡಿ ದುಃಖಿಸುವವರೇ, ಮುಂದೇನು ಗತಿಯೆಂದು ಶೂನ್ಯವಾಗಿ ನೋಡುವವರೇ,

ರಾಣಿ ಉಮಾ ಎಲ್ಲವನ್ನು ಕಾಣುತ್ತಿದ್ದಳು. ಆಕೆ ಆ ದುಃಖದಿಂದ ನಿಸ್ಪೃಹಳಾಗಿದ್ದಳು. ಆದರೆ ರಾಜನ ಶವದೊಂದಿಗೆ ಸತಿ ಹೋಗಬೇಕೆಂಬುದನ್ನು ನೆನೆಸಿ ಒಂದಿಷ್ಟು ನಡುಗಿದಳು. 'ಯಾಕಾದರೂ ಬೇಕಿತ್ತು ಈ ಅರಮನೆ?' ಎಂದುಕೊಂಡಳು. ಆದಕ್ಕಾಗಿ ದುಃಖಿಸಿದಳು. ಮ್ಲಾನವದನಳಾಗಿ ತನ್ನ ಶಯನಾಗಾರಕ್ಕೆ ನಡೆದು 'ಅಯ್ಯೊ, ನನ್ನ ಕನಸು ಕನಸಾಗಿಯೇ ಉಳಿಯಿತಲ್ಲ?" ಎಂದು ಅತ್ತಳು.

ಎಷ್ಟೋ ಹೊತ್ತು ಸರಿದ ಅನಂತರ ಮಹಾಮಂತ್ರಿ ಬಂದು ರಾಣಿ ಯೆದುರು ಪೊಡಮಟ್ಟು ನಿಂತ. ರಾಣಿ ಅವನ ಬಾಯಿಂದ ಬರುವ ಮುಂದಿನ ತನ್ನ ಚಿತಾರೋಹಣದ ಮಾತನ್ನು ಕೇಳಲಾಗಿಯೇ ಎಂಬಂತೆ ಅವನತ್ತ ತಲೆಯೆತ್ತಿ ನೋಡಿದಳು. ಮಹಾಮಂತ್ರಿ ವಿನಯವಾಗಿ ನುಡಿದ, "ರಾಣಿಯವರ ದುಃಖದ ಮೇಲೆ ಬರೆ ಎಳೆಯಲು ಇಲ್ಲಿಯ ತನಕ ಬರಬೇಕಾಯಿತು. ರಾಜಕಾರ್ಯ, ಕ್ಷಮಿಸಬೇಕು. ರಾಜ್ಯದ ಒಳಿತಿಗಾಗಿಯೇ ನಾವು ಶ್ರಮಿಸಬೇಕಾದುದು ನಮ್ಮ ಕರ್ತವ್ಯ. ರಾಜ್ಯದ ನ್ಯಾಯವನ್ನು ಕಾಪಾಡಬೇಕು; ಪ್ರಜರಿಗೂ ಕ್ಷೇಮವಾಗಬೇಕು. ಅದಕ್ಕಾಗಿ ಸನ್ನಿಧಾನದಲ್ಲಿ ಎರಡು ಮಾತನ್ನು ಹೇಳಬೇಕಾಗಿದೆ..."

"ಮಂತ್ರಿಗಳ ಮಾತು ಅರ್ಥವಾಯಿತು. ಪ್ರಾಚೀನವಾಗಿ ನಡೆದು ಬಂದ ಧರ್ಮವನ್ನು ನಾವೂ ಒಂದು ಕ್ಷಣದ ಬದುಕಿಗಾಗಿ ಮುರಿಯುವುದು ತಪ್ಪು. ಅದಕ್ಕಾಗಿ ಹಿಂದೆ ನಡೆದು ಬಂದುದಕ್ಕೆ ನಾವಿಂದು ಬಾಗಲೇ ಬೇಕು. ಬಾಗಿದ್ದೇವೆ. ಮುಂದಿನ ಕರ್ತವ್ಯವೇನೆಂದು ಹೇಳೋಣಾಗಲಿ" ಎಂದಳು ಉಮಾ. ಮಂತ್ರಿ ಬಾಗಿ ನಿಂತು,

"ಆ ಹಿಂದಿನ ಪದ್ಧತಿಯನ್ನು ಇಂದೀಗ ಮುರಿಯಬೇಕಾಗಿದೆ ಮಹಾರಾಣಿ. ಈ ಇಚ್ಛೆ ಪ್ರಭುಗಳಿಗೂ ಇದ್ದುದರಿಂದ ಅಷ್ಟಪ್ರಧಾನರು ಸೇರಿ ಇದೇ ನಿರ್ಣಯವನ್ನು ನಾವು ಬಲಪಡಿಸಲೇಬೇಕಾಯಿತು. ತಾವು ಮಹಾರಾಜರ ಭೌತಿಕ ಶರೀರದೊಂದಿಗೆ ಸತಿ ಹೋಗುವುದನ್ನು ನಿಲ್ಲಿಸಲೇ ಬೇಕು ಎಂದು ಹೇಳಲು ಬಂದಿದ್ದೇವೆ" ಎಂದ.



ಉಮೆಗೆ ಆ ಮಾತನ್ನು ಕೇಳಿ ಹರ್ಷವಾಯಿತು. ಆದರೆ ಅದನ್ನು ಆಕೆ ತೋರ್ಪಡಿಸಲಿಲ್ಲ. ಆಕೆ ನುಡಿದಳು. "ಪ್ರಾಚೀನವಾಗಿ ನಡೆದು ಬಂದ ಕಟ್ಟನ್ನು ಪಾಲಿಸಿಕೊಂಡು ಬರಬೇಕಾದುದು ನಮ್ಮ ಧರ್ಮ. ಅದೂ ಅಲ್ಲದೆ ಪ್ರಭುಗಳು ಗತಿಸಿದ ಮೇಲೆ ಬರಡಾದ ಈ ಬಾಳ್ವೆಯನ್ನು ಮುಂದುವರಿಸುವ ಇಚ್ಛೆಯೂ ನಮಗಿಲ್ಲ. ಆದುದರಿಂದ ನಾವು ಧರ್ಮ ಮೀರಿದಂತೆಯೂ ಆಗುವುದಿಲ್ಲ. ಮನಸ್ಸಿನ ಇಚ್ಛೆಗೂ ವಿರೋಧ ಬರುವುದಿಲ್ಲ. ಅದಕ್ಕಾಗಿ ಸ್ವಸಂತೋಷದಿಂದ ಸತಿ ಹೋಗಲು ಅವಕಾಶ ಕೊಡಿ. ಈ ರಾಜ್ಯಭಾರದ ಝಂಝಾವಾತಕ್ಕೆ ನಮ್ಮನ್ನು ಹಾಕಬೇಡಿರಿ........."

ಮಂತ್ರಿ ಒಂದು ಕ್ಷಣ ಸ್ತಬ್ಧನಾಗಿ ನಿಂತ. ಅವನಿಗೆ ಆ ಮಾತಿಗೆ ಉತ್ತರವೇನು ಕೊಡಲೆಂದು ತಿಳಿಯಲಿಲ್ಲ. ಆದರೂ ಧೈರ್ಯ ತಂದುಕೊಂಡು ನುಡಿದ, "ಮಹಾರಾಣಿ ತಾವು ನುಡಿದುದರಲ್ಲಿ ಅತಿಶಯೋಕ್ತಿ ಏನೂ ಇಲ್ಲ. ಅದು ಸಹಜವೇ. ಆದರೆ ಈಗ ತಮ್ಮ ಮುಂದೆ ನಾನು ರಾಜ್ಯದ ಪ್ರಜೆಗಳ ಒಮ್ಮತವನ್ನೆ ನುಡಿಯುತ್ತಿದ್ದೇನೆ. ಅವರೇ ನನ್ನ ಬಾಯಿಂದ ಈ ಮಾತುಗಳನ್ನು ನುಡಿಸುತಿದ್ದಾರೆಯೇ ಹೊರತು ಇದು ನನ್ನ ಸ್ವಂತಾಭಿಪ್ರಾಯ ಅಲ್ಲ. ಪ್ರಭುಗಳು ಹೋದಮೇಲೆ ರಾಜ್ಯ ಅನಾಯಕವಾಗಬಾರದು; ಈ ರಾಜ್ಯ ಕಟ್ಟಲು ಹರಿದ ರಕ್ತದ ನೆನಪನ್ನು ಮಾಡಬೇಕು. ಅಳಿದ ಪ್ರಾಣದ ಕುರಿತು ಯೋಚಿಸಬೇಕು. ಆಗ ನನ್ನ ಮಾತು ಎಷ್ಟು ನ್ಯಾಯೋಚಿತ ಎಂದು ನೀವು ತಿಳಿಯುತ್ತೀರಿ. ಪ್ರಭುಗಳು ಸಂದ ವ್ಯಥೆ ನಮಗೂ ಇದೆ. ಆದರೆ ಕರ್ತವ್ಯದ ದೃಷ್ಟಿಯಿಂದ ಅದನ್ನು ಸಾವರಿಸಿಕೊಳ್ಳಬೇಕಾಗಿದೆ."

ಉಮೆ ತುಸುಹೊತ್ತು ಹಾಗೆ ಕುಳಿತಳು. "ಪ್ರಜರ ಹಿತದೃಷ್ಟಿಯನ್ನು ನೋಡುವುದು ಈಗ ನಮ್ಮಮೇಲೆ ಬಿದ್ದರೆ, ಅದೇ ಅಭಿಪ್ರಾಯ ಹತ್ತು ಸಮಸ್ತರದಾದ ಮೇಲೆ ಪ್ರಭುಗಳೂ ಅದೇ ಸೂಚನೆಯನ್ನಿತ್ತ ಬಳಿಕ ಅದಕ್ಕಾಗಿ ನಾನು ಯೋಚಿಸಬೇಕಾದ ಅವಶ್ಯಕತೆಯಿಲ್ಲ. ನಿಮ್ಮೆಲ್ಲರ ಇಷ್ಟ ನಮ್ಮದು" ಎಂದು ಮಾತು ಮುಗಿಸಿದಳು ಆ ಮಾತನ್ನು ಕೇಳಿ ಮಂತ್ರಿ ಸಂತಸದಿಂದ ಅಪ್ಪಣೆ ಪಡೆದು ಹೊರಟು ಹೋದ.

ರಾಣಿ ಉಮಾಳಿಗೆ ವಿಧಿಯೊಂದು ಆಡುವ ಆಟವನ್ನು ಕಂಡು ಆಕೆಯ ಮನಸ್ಸಿನಲ್ಲಿ ಮೂಡಲ್ಪಟ್ಟ ಚಿತ್ರವಿಂದು ನೂತನವಾಗಿ ಹೊರಬರಲು ಚಡಪಡಿಸುತ್ತ ಯತ್ನಿಸುತ್ತಿದೆ. ಅದಕ್ಕೆ ಕಾಲವೂ ಸನ್ನಿಹಿತವಾಗುತ್ತಲೇ ಬರುತ್ತಿದೆ. ಎಂಬುದನ್ನು ನಿರ್ಧರಿಸಿಕೊಂಡು ಆಕೆಗೆ ಸಂತಸವಾಯಿತು. ಆದರೂ ಅದನ್ನಾಕೆ ತೋರ್ಪಡಿಸದೆ ವ್ಯಥೆಯೊಂದರಿಂದ ನೊಂದಂತೆ ಬೆಂದಂತೆ ಬಾಡಿದ ಮುಖದಿಂದ ಕುಳಿತಳು.

ಅರಮನೆಯ ಮುಂಭಾಗದಲ್ಲಿ ಜನರು ತಮ್ಮ ಪ್ರಭುವಿನ ಅಂತಿಮ ದರ್ಶನಕ್ಕಾಗಿ ಗುಂಪುಗುಂಪಾಗಿ ಸೇರಿದ್ದರು, ಆತುರಾತುರವಾಗಿ ಕೊರಳುದ್ದ ಮಾಡುತ್ತ ನಿಶ್ಶಬ್ದರಾಗಿ ನಿಂತಿದ್ದರು. ಕರುಣಾಜನಕವಾಗಿ ವಾದ್ಯ ಮೊರೆಯಿಡುತ್ತಿತ್ತು. ಹಯಗಳು ಮೌನವಾಗಿ ನಿಂತಿದ್ದುವು. ಸೈನಿಕರೆಲ್ಲ ನತಮಸ್ತಕರಾಗಿ ಸಾಲುಗಟ್ಟಿದರು.

ರಾಣಿ ಅದೇ ದೃಶ್ಯವನ್ನು ಕಲ್ಪಿಸಿಯೇ ಕಾಣುತ್ತಿದ್ದಳು. ಆ ವಾದ್ಯರವ ಆಕೆಗೆ ಏನನ್ನೋ ನೋವನ್ನು ಕೊಟ್ಟರೆ ಇನ್ನೊಮ್ಮೆ ಅತೃಪ್ತ ಮನಸ್ಸಿಗೆ ತೃಪ್ತಿ ದೊರೆಯುವುದೂ ಅದೇ ನಿಸ್ವನದಿಂದ ಎಂದೆಣಿಸುತ್ತಿದ್ದಳು. ಆಕೆ ನೆಟ್ಟ ದೃಷ್ಟಿಯಿಂದ ನೋಡುತ್ತ ತನ್ನ ಹೃದಯದಲ್ಲಡಗಿದ್ದ ಕತ್ತಲು ಕಳೆದು ಪ್ರಭಾಕಿರಣಗಳೆಂದು ಉದಿಸಿಯಾವು ಎಂದು ಹಾರೈಸುತ್ತ ಕುಳಿತೇ ಕುಳಿತಳು. ○

---

ಹಳೆಯ ವಿದ್ಯಾರ್ಥಿಗಳ ಸಂಘ. ಶ್ರೀ ಸಿದ್ಧಗಂಗಾ ಕ್ಷೇತ್ರ

## ವಿಶೇಷ ಸರ್ವಸದಸ್ಯರ ಮಹಾಧಿವೇಶನದ ಆಹ್ವಾನ ಪತ್ರಿಕೆ

ಸನ್ಮಿತ್ರರೇ,

ದಿನಾಂಕ 13-1-1990ರಂದು ಶ್ರೀ ಕ್ಷೇತ್ರದಲ್ಲಿ ಸಮಾವೇಶಗೊಂಡಿದ್ದ ಸಂಘದ ಸರ್ವಸದಸ್ಯರ ಮಹಾಧಿವೇಶನದಲ್ಲಿ ಪರಮ ಪೂಜ್ಯ ಶ್ರೀ ಶ್ರೀಗಳವರ 60ನೇ ವರ್ಷದ ಪಟ್ಟಾಧಿಕಾರ 'ವಜ್ರಮಹೋತ್ಸವ'ವನ್ನು ಆಚರಿಸಬೇಕೆಂಬ ತೀರ್ಮಾನವನ್ನನುಸರಿಸಿ ಆ ಬಗ್ಗೆ ಕಾರ್ಯಕ್ರಮವನ್ನು ರೂಪಿಸಲು ದಿನಾಂಕ 19 8.1990ನೇ ಭಾನುವಾರ ಬೆಳಿಗ್ಗೆ 10-00 ಘಂಟೆಗೆ ಶ್ರೀ ಮಠದಲ್ಲಿ ಪರಮ ಪೂಜ್ಯರ ನೇತೃತ್ವದಲ್ಲಿ ಸಂಘದ "ವಿಶೇಷ ಸರ್ವ ಸದಸ್ಯರ ಮಹಾಧಿವೇಶನವನ್ನು" ಕರೆಯಲಾಗಿದೆ. ಪ್ರಯುಕ್ತ ಆ ಬಗ್ಗೆ ಚರ್ಚಿಸಲು ತಾವೆಲ್ಲರೂ ಹಳೆಯ ಗೆಳೆಯರೊಡನೆ ತಪ್ಪದೆ ಸಭೆಗೆ ಆಗಮಿಸಿ ತಮ್ಮ ಅಮೂಲ್ಯ ಸಲಹೆ ಸಹಕಾರವನ್ನಿತ್ತು ಅಧಿವೇಶನವನ್ನು ಯಶಸ್ವಿಗೊಳಿಸಬೇಕೆಂದು ಕೋರುತ್ತೇನೆ.

ಸಂಘದ ಬಹುಜನ ಸದಸ್ಯರುಗಳ ವಿಳಾಸಗಳು ಬದಲಾಗಿರುವುದರಿಂದ ವ್ಯವಹರಿಸುವ ಪತ್ರಗಳು ತಲುಪುತ್ತಿಲ್ಲ. ತಮ್ಮ ಬದಲಾದ ವಿಳಾಸವನ್ನು ಆಗಿಂದಾಗ್ಗೆ ಕಳುಹಿಸಿಕೊಟ್ಟು ಶ್ರೀ ಮಠದ ಕಾರ್ಯ ಚಟುವಟಿಕೆಗಳು ತಮಗೆ ತಲುಪುವುದಕ್ಕೆ ಸಹಕರಿಸುತ್ತೀರೆಂದು ನಂಬಿರುತ್ತೇನೆ.

ಮನವಿ :

- ಇನ್ನೂ ಸಂಘಕ್ಕೆ 'ಆಜೀವ ಸದಸ್ಯತ್ವ' ಪಡೆಯದೇ ಇರುವ ಮಿತ್ರರು ಕೂಡಲೇ ಸದಸ್ಯತ್ವ ಪಡೆದುಕೊಳ್ಳಿ.
- ಸಂಘದ ವತಿಯಿಂದಲೇ ಪ್ರಕಟವಾಗುತ್ತಿರುವ 'ಸಿದ್ಧಗಂಗಾ ಮಾಸ ಪತ್ರಿಕೆ"ಗೆ ಹಳೆಯ ವಿದ್ಯಾರ್ಥಿಗಳಾದ ನೀವು ಸದಸ್ಯತ್ವ ಪಡೆದು ಕೊಳ್ಳಲು ವಿನಂತಿ.

ವಾರ್ಷಿಕ ಚಂದಾ : 20-00 ರೂಗಳು. ಆಜೀವ ಚಂದಾ : 250-00 ರೂಗಳು.

ತಾ॥ 16-7-90

ಡಾ॥ M. N. ಚನ್ನಬಸಪ್ಪ
ಪ್ರಧಾನ ಕಾರ್ಯದರ್ಶಿ

## ಪರಮ ಪೂಜ್ಯ ಶ್ರೀ ಶ್ರೀಗಳವರ ಜುಲೈ ತಿಂಗಳ ಕಾರ್ಯಕ್ರಮಗಳು

1-7-90 ರಿಂದ 3-7-90 ರವರೆಗೆ ಶ್ರೀ ಮಠದಲ್ಲಿ ಉಚಿತ ವಿಧ್ಯಾರ್ಥಿ ನಿಲಯಕ್ಕೆ ವಿದ್ಯಾರ್ಥಿಗಳ ದಾಖಲೆ ಕಾರ್ಯಗಳು,

4-7-90 ನೆಲಮಂಗಲ ತಾ॥ ಹುಸ್ಕೂರು ಗ್ರಾಮದ ಗಂಗಾಧರಪ್ಪನವರ ಮನೆಯಲ್ಲಿ ಆರಾಧನ ಸಂಬಂಧಿ ಪೂಜಾಕಾರ್ಯಕ್ರಮ.

5-7-90 ನಾಗಶೆಟ್ಟಿಹಳ್ಳಿಯಲ್ಲಿ ಆರಾಧನಾ ಅಂಗವಾಗಿ ಪೂಜೆ
ಸಂಜೆ ಶ್ರೀ ಮಠದಲ್ಲಿ ವಿದ್ಯಾಸಂಸ್ಥೆಗೆ ಸಂಬಂಧಿಸಿದ ಸಮಾವೇಶ.

6-7-90 ಬೆಂಗಳೂರು ಅಲಸೂರಿನಲ್ಲಿ ಪೂಜಾಕಾರ್ಯಕ್ರಮ-ಸಂಜೆ ನೆಲಮಂಗಲದ ಜೂನಿಯರ್ ಕಾಲೇಜಿನಲ್ಲಿ ಕಾಮರ್ಸ್ ಕೋರ್ಸ್ ವಿಭಾಗದ ಪ್ರಾರಂಭೋತ್ಸವ ಕಾರ್ಯಕ್ರಮದಲ್ಲಿ.

7-7-90 ಶ್ರೀ ಮಠದಲ್ಲಿ ವಿದ್ಯಾರ್ಥಿಗಳ ದಾಖಲೆ ಕಾರ್ಯಗಳು.

8-7-90 ಮಂಡ್ಯ ಜಿಲ್ಲೆ. ಜಿ. ಹೊಸಳ್ಳಿಯಲ್ಲಿ ಪೂಜಾಕಾರ್ಯಕ್ರಮ.

9-7-90 ಹಾಸನ ಜಿಲ್ಲೆ ಬೇಲೂರು ಹಾಸ್ಟಲ್ ಸಮಾರಂಭ.

10-7-90 ಶ್ರೀ ಮಠದಲ್ಲಿ ವಾಸ್ತವ್ಯ-ವಿದ್ಯಾರ್ಥಿಗಳ ದಾಖಲಾತಿ ಕಾರ್ಯಗಳು

11-7-90 ಕ್ಯಾತಸಂದ್ರದಲ್ಲಿ ಶಾಲಾ ಸಮಾರಂಭ.

12-7-90 ಶ್ರೀ ಮಠದಲ್ಲಿ ವಾಸ್ತವ್ಯ-ಶಾಲಾ-ಕಾಲೇಜುಗಳು ದಾಖಲಾತಿ ಕಾರ್ಯಗಳು

13-7-90 ಕ್ಯಾತಸಂದ್ರ ನಿವೇದಿತಾ ಶಾಲೆಯ ಸಮಾರಂಭ.

14-7-99 ಕುಣಿಗಲ್ ತಾಲ್ಲೂಕು, ಎಡೆಯೂರು ಸಿದ್ಧಲಿಂಗೇಶ್ವರ ಸ್ವಾಮಿ ದೇವಸ್ಥಾನದ ಸಮಾರಂಭ.

15-7-90 ಬೆಳಿಗ್ಗೆ 10 ಕ್ಕೆ ಚಿತ್ರದುರ್ಗ ಜಿಲ್ಲೆ ಹಿರಿಯೂರಿನಲ್ಲಿ ವಾಸವಿ ಮೊಹಲ್ಲಾ ಉದ್ಘಾಟನೆ. ಸಂಜೆ 4ಕ್ಕೆ ಬೆಂಗಳೂರಿನಲ್ಲಿ ಕಾರ್ಯಕ್ರಮ.

16-7-90 ಬೆಳಿಗ್ಗೆ ತಲಕಾಡು ಬಳಿ ಮಳವಳ್ಳಿಯಲ್ಲಿ ಆರಾಧನಾ ಅಂಗವಾಗಿ ಪೂಜಾ ಕಾರ್ಯಕ್ರಮ.

17-7-90 ಶ್ರೀ ಮಠದಲ್ಲಿ ವಾಸ್ತವ್ಯ.

18-7-90 ತುಮಕೂರು ತಾ|| ಚಿಕ್ಕಹಳ್ಳಿ ಬಸಪ್ಪನವರ ಮನೆಯಲ್ಲಿ ಪೂಜೆ

19-7-90 ಶ್ರೀಮಠದಲ್ಲಿ ವಾಸ್ತವ್ಯ.

20-7-90 ಹಾಸನ ಜಿಲ್ಲೆ ಸಕಲೇಶಪುರ ಶ್ರೀ J. D. ಸೋಮಪ್ಪ ಅವರ ಮನೆಯಲ್ಲಿ ಪೂಜೆ.

21-7-90 ಶ್ರೀಮಠದಲ್ಲಿ ವಾಸ್ತವ್ಯ.

22-7-90 ತುಮಕೂರು ತಾ|| ಕೋಡಿಯಾಲ ಗ್ರಾಮದಲ್ಲಿ ಪೂಜೆ

23-7-90 ಬೆಂಗಳೂರಿನಲ್ಲಿ ವಿಜಯನಗರದ ಶಿವಣ್ಣನವರ ಮನೆಯಲ್ಲಿ ಪೂಜೆ.

24-7-90 ನೆಲಮಂಗಲ ತಾ|| ಮಣ್ಣೆ ಗ್ರಾಮದ ಶ್ರೀ ನೀಲಕಂಠಯ್ಯನವರ ಮನೆಯಲ್ಲಿ ಪೂಜೆ.

25-7-90 ಕುಣಿಗಲ್ ತಾ|| ಹೊನ್ನೇನಹಳ್ಳಿಯ ಶ್ರೀ ಶಿವಲಿಂಗಯ್ಯನವರ ಮನೆಯಲ್ಲಿ ಆರಾಧನೆ ಅಂಗವಾಗಿ ಪೂಜೆ.

26-7-90 ಬೆಳ್ಳಿಗೆ 8ಕ್ಕೆ ಮಾಗಡಿ ತಾ|| ರಂಗೇನಹಳ್ಳಿಯಲ್ಲಿ ದೇವಸ್ಥಾನ ಕಟ್ಟಡದ ಗುದ್ದಲಿ ಪೂಜೆ. ಮಧ್ಯಾಹ್ನ ಬೆಂಗಳೂರು ಅಗ್ರಹಾರ ದಾಸರಹಳ್ಳಿ ಆರ್. ಜಗದೀಶ್ ಅವರ ಗೃಹಪ್ರವೇಶ ಅಂಗವಾಗಿ ಪೂಜೆ.

27-7-90 ಬೆಳಿಗ್ಗೆ 9ಕ್ಕೆ ಬೆಂಗಳೂರು, ಇಂದಿರಾನಗರದಲ್ಲಿರುವ ಶ್ರೀ ಕೆ. ಎಲ್. ನಂಜಪ್ಪನವರ ಮನೆಯಲ್ಲಿ ಪೂಜೆ. ಮಧ್ಯಾಹ್ನ 11 ಘಂಟೆಗೆ ದೊಡ್ಡಬಳ್ಳಾಪುರ ಕೈಗಾರಿಕಾವಲಯದಲ್ಲಿ ಹೊಸಉದ್ಯಮ ಪ್ರಾರಂಭೋತ್ಸವ

28-7-90 ಬೆಳಿಗ್ಗೆ ಬೆಂಗಳೂರು ಟಿ. ದಾಸರಹಳ್ಳಿಯಲ್ಲಿರುವ ಎನ್. ಕೆ. ಗಂಗಾಧರಯ್ಯನವರ ಮನೆಯಲ್ಲಿ ಪೂಜೆ.

29-7-90 ತುಮಕೂರು, ಹನುಮಂತಪುರದಲ್ಲಿರುವ ಶ್ರೀ ಹೆಚ್. ಎಸ್. ಬಸವರಾಜಯ್ಯ ಅವರ ಮನೆಯಲ್ಲಿ ಪೂಜೆ.

30-7-90 ಬೆಂಗಳೂರು ಕರ್ನಾಟಕ ಲ್ಯಾಬ್ ಕೆ. ಮುದ್ದಪ್ಪನವರು ಏರ್ಪಡಿಸಿರುವ ಕಾರ್ಯಕ್ರಮ.

31-7-90 ಶ್ರೀ ಮಠದಲ್ಲಿ ವಾಸ್ತವ್ಯ.

## ಆಸ್ತಿಕ ಬಂಧುಗಳಲ್ಲಿ ಒಂದು ವಿನಮ್ರ ಮನವಿ

1 ಶ್ರೀ ಸಿದ್ಧಗಂಗಾ ಮಠದಲ್ಲಿ ನಿತ್ಯ ನಾಲ್ಕು ಸಹಸ್ರ ವಿದ್ಯಾರ್ಥಿಗಳಿಗೆ ದಾಸೋಹ ವ್ಯವಸ್ಥೆ ನಡೆಯುತ್ತಿದೆ.

2 ನಾಲ್ಕು ಸಹಸ್ರ ವಿದ್ಯಾರ್ಥಿಗಳು ವಿವಿಧ ಸಮಾಜದಿಂದ ಬಂದವರಾಗಿರುತ್ತಾರೆ. ಜಾತ್ಯತೀತ ಮನೋಧರ್ಮವನ್ನು ರೂಢಿಸಿಕೊಂಡು ಬೆಳೆಯುವ ಮುಕ್ತ ವಾತಾವರಣ ಇಲ್ಲಿನ ವೈಶಿಷ್ಟ್ಯ.

3 ನಿತ್ಯ ಬರುವ ಸಹಸ್ರ ಸಹಸ್ರ ಯಾತ್ರಾರ್ಥಿಗಳಿಗೂ ದಾಸೋಹ ನಡೆಯುತ್ತಿದೆ.

4 **"ಸಿದ್ಧಗಂಗೆಯ ಊಟ ಶಿವಗಂಗೆಯ ನೋಟ"** ಎಂಬುದು ಗಾದೆ ಮಾತಾಗಿದೆ.

5 **" ಪ್ರಸಾದ ತೆಗೆದು ಕೊಂಡು ಹೋಗಿ "**–ಎಂಬುದೇ ಪರಮ ಪೂಜ್ಯ **ಶ್ರೀ ಶ್ರೀ ಗಳವರು** ಕ್ಷೇತ್ರಾರ್ಥಿಗಳಿಗೆಲ್ಲ ಹೇಳುವ ನಿತ್ಯ ಪಂಚಾಕ್ಷರಿ ಮಂತ್ರ

6 ಇಂಥ ದಾಸೋಹ ಮಣಿಹದಲ್ಲಿ ನಿಮ್ಮದೂ ಕಾಣಿಕೆ ಸಲ್ಲಿಸಲು ಅವಕಾಶವಿರುತ್ತದೆ.

7 ದಾಸೋಹಕ್ಕೆ ಧನ-ಧಾನ್ಯ ರೂಪದಲ್ಲಿ ಯಥಾಶಕ್ತಿ ಕಾಣಿಕೆ ಅರ್ಪಿಸಿ ಧನ್ಯರಾಗಲು ಇದೊಂದು ಅಪೂರ್ವ ಅವಕಾಶ.

8 ನೀವು ನೀಡುವ ಒಂದು ಸೇರು ಧಾನ್ಯ, ಒಂದು ರೂಪಾಯಿ ಸಾರ್ಥಕ ವಿನಿಯೋಗಕ್ಕೆ ಮೀಸಲಾಗುತ್ತದೆ.

9 ನೀವೂ ದಾಸೋಹದಲ್ಲಿ ಭಾಗಿಗಳಾಗುವ ಪುಣ್ಯ ಸಂಕಲ್ಪ ಇಂದೇ ಮಾಡುತ್ತೀರಾಗಿ **' ಸಿದ್ಧಗಂಗಾ '** ಆಶಿಸುತ್ತದೆ.